ಎಂ.ಫಿಲ್. ಪದವಿಯ ಸಂಪ್ರಬಂಧ

# ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಕೃತ ಹಸ್ತಪ್ರತಿ ಸೂಚಿಗಳು

ಒಂದು ಅಧ್ಯಯನ


ಸಂಶೋಧನ ವಿದ್ಯಾರ್ಥಿ

ರವೀಂದ್ರ ನಾಗಪ್ಪ ಬೋಳೆಗಾರವ

ಮಾರ್ಗದರ್ಶಕರು

ಪ್ರೊ|| ಜಿ. ಅಶ್ವತ್ಥನಾರಾಯಣ





ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ

ಮೂಲಕ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

೨೦೦೭

2007

193

ಎಂ.ಫಿಲ್. ಪದವಿಯ ಸಂಪ್ರಬಂಧ

# ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿ ಸೂಚಿಗಳು

ಒಂದು ಅಧ್ಯಯನ

ಸಂಶೋಧನ ವಿದ್ಯಾರ್ಥಿ

ರವೀಂದ್ರ ನಾಗಪ್ಪ ಬೋಳೆಗಾಂವ

ಮಾರ್ಗದರ್ಶಕರು

ಪ್ರೊ|| ಜಿ. ಅಶ್ವತ್ಥನಾರಾಯಣ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ

ಮೂಲಕ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ

2007

193

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೨೦೦೭ನೇ ಸಾಲಿನ ಎಂ.ಫಿಲ್ ಪದವಿಗಾಗಿ "ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿ ಸೂಚಿಗಳು - ಒಂದು ಅಧ್ಯಯನ" ಸಂಪ್ರಬಂಧವನ್ನು ಪ್ರೊ|| ಜಿ.ಅಶ್ವತ್ಥನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ 27-8-2007

ಸ್ಥಳ: ಬೆಂಗಳೂರು

ಸಹಿ.

(ರವೀಂದ್ರ ನಾಗಪ್ಪ ಬೋಳೆಗಾಂವ)

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2006–2007ನೇ ಸಾಲಿನ ಎಂ.ಫಿಲ್ ಪದವಿಗಾಗಿ 'ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿ ಸೂಚಿಗಳು– ಒಂದು ಅಧ್ಯಯನ' ಸಂಪ್ರಬಂಧವನ್ನು ಶ್ರೀ ರವೀಂದ್ರ ನಾಗಪ್ಪ ಬೋಳೆಗಾಂವ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 27-8-2007
ಸ್ಥಳ : ಬೆಂಗಳೂರು

ಸಹಿ:
(ಜಿ. ಅಶ್ವತ್ಥನಾರಾಯಣ)

## ಕರ್ನಾಟಕ ವಿಶ್ವವಿದ್ಯಾಲಯದ
## ಕನ್ನಡ ಹಸ್ತಪ್ರತಿಸೂಚಿಗಳು–ಒಂದು ಅಧ್ಯಯನ

# ಪರಿವಿಡಿ

# ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿ ಸೂಚಿಗಳು ಒಂದು ಅಧ್ಯಯನ

## ಅಧ್ಯಾಯ –1

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

ಹಸ್ತಪ್ರತಿಸಂಗ್ರಹ ಮತ್ತು ಹಸ್ತಪ್ರತಿಗಳ ಸೂಚಿರಚಿಸುವ ಕಾರ್ಯ ಪ್ರಾಚೀನಕಾಲದಿಂದಲೂ ನಡೆದು ಬಂದಿರುವುದನ್ನು ಕಾಣುತ್ತೇವೆ. ಪ್ರಾಚೀನಕಾಲದಲ್ಲಿ "ಒಂದು ಕಟ್ಟಿನಲ್ಲಿ ಅಡಕವಾಗಿರುವ ಕೃತಿಗಳಪಟ್ಟಿಯನ್ನು ಮೊದಲಿನ ಇಲ್ಲವೆ ಕೊನೆಯ ಪುಟದಲ್ಲಿ ಬರೆಯುವ ರೂಪದ್ದೂ ಅದಾಗಿರುತ್ತಿತ್ತು"[1] ಅಂತೆಯೇ ಒಂದು ಸ್ಥಳದಲ್ಲಿರುವ ಪುಸ್ತಕಯಾದಿಗಳನ್ನು ಸಿದ್ದಪಡಿಸಲಾಗುತ್ತಿತ್ತು. ನಿದರ್ಶನಕ್ಕೆ ಮುಳವಳ್ಳಿ ಮಠದಲ್ಲಿರುವ ಪುಸ್ತಕದ ವಿವರವನ್ನು ನೋಡಬಹುದು. ಹೀಗೆ ವೈಯಕ್ತಿಕವಾದ ಸೂಚಿಗಳನ್ನು ಹಿಂದಿನ ಕಾಲದ ಓಲೆಗರಿ ಪ್ರತಿಗಳಲ್ಲಿ ಕಾಣುತ್ತೇವೆ.

ಆಧುನಿಕ ಕಾಲದಲ್ಲಿ ಹಸ್ತಪ್ರತಿಗಳ ಸಂಗ್ರಹಕಾರ್ಯ ಆರಂಭವಾಗಿ ಸರ್ಕಾರಿ ಹಾಗೂ ಖಾಸಗಿ ಭಂಡಾರಗಳು ಸ್ಥಾಪಿತವಾದ ಮೇಲೆ, 'ಗ್ರಂಥಭಂಡಾರಶಾಸ್ತ್ರ' ಒಂದು ಶಿಕ್ಷಣವಾಗಿ ಪ್ರಾರಂಭವಾಯಿತು. ಅದರಂಗವಾಗಿ ಸೂಚಿಶಾಸ್ತ್ರವೂ ರೂಪುಗೊಂಡಿತು. ಹೀಗೆ ರೂಪುಗೊಂಡ ಸೂಚಿಪದ್ಧತಿಯಂತೆ ಹಸ್ತಪ್ರತಿಭಂಡಾರಗಳಲ್ಲಿ ಸೂಚಿ ವರ್ಣನಾತ್ಮಕ ಸೂಚಿಗಳು. ಸಮಗ್ರಸೂಚಿಗಳು ಸಿದ್ಧವಾದವು. ಈ ಸೂಚಿಗಳ ಲಕ್ಷಣಗಳನ್ನು ಎಂ.ಎಂ.ಕಲುಬುರ್ಗಿಅವರು ಈ ರೀತಿ ವಿವರಿಸಿದ್ದಾರೆ. "ಕೆಲವೇ ವಿವರಗಳನ್ನು ಕೊಡುವುದು **'ಸೂಚಿ'** ಎಲ್ಲ ವಿವರಗಳನ್ನು ತೋರಿಸಿಕೊಡುವುದು **'ವಿವರಣಾತ್ಮಕ ಸೂಚಿ'** ಒಂದು ಕೃತಿಯ ಪ್ರತಿಗಳು ಯಾವ ಯಾವ ಸ್ಥಳದಲ್ಲಿವೆಯೆಂಬುದನ್ನು ವಿಶಿಷ್ಟ ವಿವರಗಳೊಂದಿಗೆ ತೋರಿಸಿಕೊಡುವುದು **'ಸಮಗ್ರಸೂಚಿ'**." ಈ ಮೂರರಲ್ಲಿ ಸೂಚಿ ಎನ್ನುವುದು ಹಸ್ತಪ್ರತಿಯ ನಂಬರು, ಕೃತಿಯಶೀರ್ಷಿಕೆ, ಕವಿನಾಮ, ಪ್ರಕಾರ ಇಷ್ಟು ವಿವರಗಳ ಕಾಲಂಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಶೀರ್ಷಿಕೆಗಳನ್ನು ಅಕಾರಾದಿಯಲ್ಲಿ ಹೊಂದಿಸಲಾಗುತ್ತದೆ. ಇದನ್ನು **ಶೀರ್ಷಿಕೆಸೂಚಿ** ಎಂದು ಕರೆಯಬಹುದು. ಕವಿನಾಮದ ಕೆಳಗೆ ಹೊಂದಿಸಿದಾಗ **ಕವಿನಾಮಸೂಚಿ** ವಿಷಯಾನುಸಾರ ಅಕಾರಾದಿಯಾಗಿ ಜೋಡಿಸಿದಾಗ (Auther Index) **'ವಿಷಯಸೂಚಿ'** ಎನ್ನುತ್ತಾರೆ. (Subject Index) ಇದನ್ನು ದರ್ಶಕಸೂಚಿ ಎಂದೂ ಕರೆಯುತ್ತಾರೆ.[2]

ಸಾಮಾನ್ಯವಾಗಿ ಅಚ್ಚಿನ ಪುಸ್ತಕಭಂಡಾರಗಳಲ್ಲಿ ಇವುಗಳನ್ನು ಕಾಣುತ್ತೇವೆ.

ಇನ್ನು **'ವಿವರಣಾತ್ಮಕಸೂಚಿ'** ಎನ್ನುವುದು ಕಾರ್ಡಿನಲ್ಲಿ ಇಲ್ಲವೇ ಗ್ರಂಥರೂಪದಲ್ಲಿ ಪ್ರಕಟವಾಗಿರುತ್ತದೆ ಇದನ್ನು ಪತ್ರಕಸೂಚಿ, ಪುಸ್ತಕಸೂಚಿ ಎಂದು ಕರೆದಿದ್ದಾರೆ.

ಹಸ್ತಪ್ರತಿಗಳಸಂಗ್ರಹಭಂಡಾರಗಳೆಲ್ಲ ವಿವರಣಾತ್ಮಕಸೂಚಿಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿವೆ. ಕನ್ನಡಹಸ್ತಪ್ರತಿಗಳ ಸೂಚಿಗಳನ್ನು ಪ್ರಕಟಿಸಿರುವ ಸಂಸ್ಥೆಗಳಲ್ಲಿ ಮದರಾಸ್ ಪ್ರಾಚ್ಯಹಸ್ತಪ್ರತಿಭಂಡಾರ, ಮೈಸೂರಿನಪ್ರಾಚ್ಯವಿದ್ಯಾಸಂಸ್ಥೆ, ಮೈಸೂರುವಿಶ್ವವಿದ್ಯಾಲಯ ಕನ್ನಡ ಅಧ್ಯಯನಸಂಸ್ಥೆ,– ಧಾರವಾಡದ ಕನ್ನಡಸಂಶೋಧನಸಂಸ್ಥೆ, ಕನ್ನಡ ಅಧ್ಯಯನ ಪೀಠ, ಬೆಂಗಳೂರಿನ ಕನ್ನಡ ಅಧ್ಯಯನಕೇಂದ್ರ, ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯ ಕನ್ನಡ ವಿಭಾಗ, ಬೆಳಗಾವಿಯ ರುದ್ರಾಕ್ಷಿಮಠ, ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನ, ಮುಂತಾದವು ಕನ್ನಡ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಗಳನ್ನು ಪ್ರಕಟಿಸಿವೆ. ಈ ಪ್ರಕಟನೆಗಳನ್ನು ಕಂಡಾಗ ಕಲಬುರ್ಗಿಯವರು ಹೇಳಿದಂತೆ. "ಇಂದು ವ್ಯವಸ್ಥಿತ ರೀತಿಯಿಂದಾಗಿ ವಿವರಣಾತ್ಮಕಸೂಚಿ ಸಾಹಿತ್ಯಕ್ಕೆ ವಿಜ್ಞಾನದ ಮರ್ಯಾದೆ ಪ್ರಾಪ್ತವಾಗಿದೆ."[3]

ಹೀಗೆ ಸಿದ್ಧವಾದ ಸೂಚಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದಾಗ ಹಸ್ತಪ್ರತಿಸೂಚಿಗಳ ರಚನೆಯಲ್ಲಿ ಸಾಕಷ್ಟು ಸುಧಾರಣೆಗಳಾಗಬೇಕು ಎಂಬಂಶ ಕಂಡುಬರುತ್ತದೆ. ಮೊದಲನೆಯದಾಗಿ ಎಲ್ಲ ಗ್ರಂಥಭಂಡಾರಗಳ ಸೂಚಿಗಳು ಪೂರ್ಣವಾಗಿ ಪ್ರಕಟವಾಗಬೇಕು. ಆಯಾ ಭಂಡಾರಗಳಲ್ಲಿ ಇರುವ ಎಲ್ಲ ಹಸ್ತಪ್ರತಿಗಳ ವಿವರಗಳೂ ದಾಖಲಾಗಿ ಅಚ್ಚಾಗಬೇಕು. ಕಾಲಕಾಲಕ್ಕೆ ಹಸ್ತಪ್ರತಿಭಂಡಾರಗಳಿಗೆ ಸೇರುವ ತಾಳೆಗರಿ ಕಾಗದಪ್ರತಿಗಳ ದಾಖಲೆಯೂ ಅಚ್ಚಾಗಿ ಓದುಗರ ಕೈಗೆ ಸೇರಬೇಕು. ಈಗ ಪೂರ್ಣವಾಗಿ ಹಸ್ತಪ್ರತಿಭಂಡಾರದಲ್ಲಿ ಇರುವುದೆಲ್ಲ ವರ್ಣನಾತ್ಮಕ ಸೂಚಿಯಲ್ಲಿ ಸೂಚಿತವಾಗಿಲ್ಲ ಎನ್ನಬಹುದು. ಏಕೆಂದರೆ ಅನೇಕಕಡೆಸೂಚಿ ತಯಾರಿಕೆಗೆ, ಪ್ರಕಟನೆಗೆ ವಿಶೇಷ ಪ್ರಾಶಸ್ತ್ಯನೀಡಿಲ್ಲ. ಇದಕ್ಕಾಗಿ ಪ್ರತ್ಯೇಕ ಸಿಬ್ಬಂದಿ ಯೋಜನೆ ಇಲ್ಲ.

ಇನ್ನು ವಿವಿಧ ಹಸ್ತಪ್ರತಿಭಂಡಾರಗಳು ಸಿದ್ಧಪಡಿಸಿರುವ ಸೂಚಿಗಳ ತೌಲನಿಕ ಅಧ್ಯಯನ ನಡೆದಿಲ್ಲ, ಉದಾಹರಣೆಗೆ, ಕನ್ನಡ ಅಧ್ಯಯನಪೀಠ ಮತ್ತು ಕನ್ನಡ ಸಂಶೋಧನಸಂಸ್ಥೆ ಒಂದೇ ವಿಶ್ವವಿದ್ಯಾಲಯದ ಅಡಿಯಲ್ಲೇ ಬರುವ ಅಂಗಗಳಾದರೂ ಸೂಚಿವಿವರಗಳನ್ನು ನೀಡುವಲ್ಲಿ ಏಕರೂಪತೆಗೆ ಪ್ರಯತ್ನಿಸಿಲ್ಲ. ಪ್ರತಿ ಸೂಚಿಸಂಪುಟದಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಸೂಚಿಯಲ್ಲಿ ಗ್ರಂಥಗಳ ಅಕಾರಾದಿಪಟ್ಟಿ ಗ್ರಂಥಕರ್ತೃಗಳ ಅಕಾರಾದಿಪಟ್ಟಿ ಕೊಟ್ಟಿದೆ. ಇದು ಉಪಯುಕ್ತವಾದುದು. ಕನ್ನಡ ಅಧ್ಯಯನ

ಪೀಠದಸೂಚಿಯಲ್ಲಿ ಇದು ಇಲ್ಲ, ಅಧ್ಯಯನ ಪೀಠದಸೂಚಿಗೆ ಮೊದಲು ಸಿದ್ಧವಾಗಿಪ್ರಕಟವಾದುದು. ಸಂಶೋಧನ ಸಂಸ್ಥೆಯ ಪ್ರಕಟನೆ ಮತ್ತು ಒಂದೇ ಕಟ್ಟಡದಲ್ಲಿ ಇದ್ದ ವಿಭಾಗಗಳು ಇವೆರಡೂ ಆದರೂ ಆ ಬಗ್ಗೆ ಗಮನವೀಯದಿರುವುದನ್ನು ನೋಡಬಹುದು. ತೌಲನಿಕವಾಗಿ ಹಸ್ತಪ್ರತಿಸೂಚಿಗಳ ಅಧ್ಯಯನದ ಅವಶ್ಯಕತೆಯನ್ನು ಇದುವರೆಗೆ ಗಮನಿಸಿಲ್ಲ. ಈ ಅಂಶದ ಕಡೆ ಈ ಅಧ್ಯಯನದಲ್ಲಿ ಗಮನವೀಯಲಾಗಿದೆ. ಕನ್ನಡ ಸಂಶೋಧನ ಸಂಸ್ಥೆಯ ಪ್ರಾಚೀನ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ಗಮನಿಸಿದಾಗ ಆಚ್ಚರಿಯಾಗುತ್ತದೆ. ಅದರ ಸೂಚಿಶಿಲ್ಪ ಆದರ್ಶಪ್ರಾಯವಾದುದು. ಈ ಸಂಪುಟಗಳ ಸಂಪಾದಕರು ಕನ್ನಡ ಕವಿಚರಿತ್ರೆಯಲ್ಲಿ ಉಲ್ಲೇಖವಿಲ್ಲದ ಹಸ್ತಪ್ರತಿಗಳನ್ನು ಗುರುತಿಸಿದ್ದಾರೆ. ಪ್ರಾರಂಭದಲ್ಲಿ ಅಯಾ ಸಂಪುಟದಲ್ಲಿ ಉಲ್ಲೇಖಿತ ಗ್ರಂಥಗಳ ಗ್ರಂಥಕಾರರ ಅಕಾರಾದಿ ಪಟ್ಟಿ ಕೊಟ್ಟಿದ್ದಾರೆ. ಇದು ಅನೇಕ ಹಸ್ತ ಪ್ರತಿಸೂಚಿಗಳಲ್ಲಿ ಕಾಣುವುದಿಲ್ಲ ಹೀಗೆ ಹಲವಾರು ಗಮನಾರ್ಹ ವ್ಯತ್ಯಾಸಗಳನ್ನು ಈ ಅಧ್ಯಯನದಲ್ಲಿ ಗುರುತಿಸಲು ಯತ್ನಿಸಿದೆ.

ಕನ್ನಡದಲ್ಲಿ ಇದುವರೆಗೆ ಬಂದಿರುವ ಸೂಚಿಗಳು ಆಯಾ ಸಂಸ್ಥೆಗಳಲ್ಲಿರುವ ಗ್ರಂಥವಿವರಗಳನ್ನು ನೀಡುತ್ತವೆ. ಅಲ್ಲಿರುವ ಗ್ರಂಥಗಳ ಪ್ರತಿಗಳು ಉಳಿದಕಡೆ ಇರುವ ಬಗ್ಗೆ ಚಕಾರವೆತ್ತುವುದಿಲ್ಲ. ಈ ಬಗ್ಗೆ ಮಾಹಿತಿ ಕೊಟ್ಟಿದ್ದರೆ ಈ ಸಂಸ್ಥೆಯಲ್ಲಿರುವ ಪೂರ್ಣಪ್ರತಿ, ಶುದ್ಧಪ್ರತಿ, ಅಪೂರ್ಣಪ್ರತಿ, ಅಶುದ್ಧಪ್ರತಿ ಬಗ್ಗೆ ಉಪಯುಕ್ತಮಾಹಿತಿ ಸಿಗುತ್ತಿತ್ತು. ಈ ಅಂಶದ ಕಡೆ ಈ ಅಧ್ಯಯನದಲ್ಲಿ ಗಮನಸೆಳೆಯಲಾಗಿದೆ.

ಒಂದೇ ವಿಶ್ವವಿದ್ಯಾಲಯದಲ್ಲಿ ಕನ್ನಡ ಹಸ್ತ ಪ್ರತಿಗಳ ಬಗ್ಗೆ ಎರಡು ಬಗೆಯಲ್ಲಿ ಹಸ್ತಪ್ರತಿಸೂಚಿಗಳು ಹತ್ತಾರು ಸಂಪುಟಗಳು ಪ್ರಕಟವಾಗಿರುವ ಕೀರ್ತಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲುತ್ತದೆ. ಮತ್ತು ಇಲ್ಲಿ ಪ್ರಕಟವಾದ ಸೂಚಿಗಳನ್ನು ಆಕರವಾಗಿಟ್ಟುಕೊಂಡು ಸೂಚಿಗ್ರಂಥಗಳ ವಿಮರ್ಶೆಗೆ ತೊಡಗಿದೆ. ಈ ಸೂಚಿಗಳ ವೈಶಿಷ್ಟ್ಯಗಳನ್ನು ವಿವೇಚಿಸಲಾಗಿದೆ. ಮುಖ್ಯವಾಗಿ ಕನ್ನಡ ಸಂಶೋಧನ ಸಂಸ್ಥೆಯ 13 ಸಂಪುಟಗಳನ್ನು ಕನ್ನಡ ಅಧ್ಯಯನಪೀಠದ 6 ಸಂಪುಟಗಳ ವಿಸ್ತೃತ ವಿವೇಚನೆ ಈ ಅಧ್ಯಯನದ ಮುಖ್ಯಗುರಿಯಾಗಿದೆ. ಹಸ್ತಪ್ರತಿಶಾಸ್ತ್ರದ ಅಂಗವಾದ ಸೂಚಿಗ್ರಂಥಗಳ ಬಗ್ಗೆ ವಿಸ್ತೃತ ಅಧ್ಯಯನ ಮೊದಲಬಾರಿಗೆ ಇಲ್ಲಿ ಕೈಗೊಂಡಿದೆ. ಆದರ್ಶ ಸೂಚಿನಿರ್ಮಾಣಕ್ಕೆ ಈ ಅಧ್ಯಯನ ನೆರವಾಗಲಿದೆ.

---

# ಅಧ್ಯಾಯ –2

# ಕನ್ನಡ ಹಸ್ತಪ್ರತಿಗಳ ಇತಿಹಾಸ ಮತ್ತು ಕನ್ನಡ ಹಸ್ತಪ್ರತಿ ಭಂಡಾರಗಳು

## ಹಸ್ತಪ್ರತಿ ಎಂದರೇನು?

ಹಸ್ತಪ್ರತಿ ಸೂಚಿಗಳ ಇತಿಹಾಸ ತಿಳಿಯುವ ಮೊದಲು ಅವುಗಳ ಸ್ವರೂಪ ಸಂಗ್ರಹ–ವಿಚಾರಗಳನ್ನು ತಿಳಿಯಬೇಕು ಅನಂತರ ಸೂಚೀಕರಣದ ಬಗ್ಗೆ ವಿಚಾರಮಾಡಬೇಕು ಆನಂತರ ಸಂಪಾದನೆ ಅಧ್ಯಯನ ಸಾಗಬೇಕು. ಹೀಗೆ ಸ್ವರೂಪ (ಸರ್ವೇಕ್ಷಣ)– ಸಂಗ್ರಹ – ಸೂಚೀಕರಣ – ಸಂಪಾದನೆ – ಅಧ್ಯಯನ ಎಂಬ ಐದು ಮಜಲುಗಳನ್ನು ತಿಳಿಯಬೇಕಾಗುತ್ತದೆ.

ಹಸ್ತಪ್ರತಿ ಎಂದರೆ ತಾಳೆಗರಿ, ಕೋರಿ ಕಾಗದ, ಕಡತ ಮತ್ತು ಆಧುನಿಕ ಕಾಗದದ ಪ್ರತಿ ನಾಲ್ಕನ್ನು ಒಳಗೊಳ್ಳುತ್ತದೆ. ಇವುಗಳನ್ನು ಸಂಗ್ರಹಿಸಲು ಕ್ಷೇತ್ರಕಾರ್ಯ ಮುಖ್ಯ ಮತ್ತು ಮೊದಲು ಹಸ್ತಪ್ರತಿಗಳು ಇದ್ದರಲ್ಲವೇ ಮುಂದಿನ ಕೆಲಸ? ಹಸ್ತಪ್ರತಿ ಎಂದರೇನು? ಎಂ.ವಿ. ಸೀ. ಹೇಳುವಂತೆ "ನಮ್ಮ ಪೂರ್ವಜರು ನಮ್ಮ ಉಪಯೋಗಕ್ಕಾಗಿ ಬಿಟ್ಟು ಹೋಗಿರುವ ಕೈ ಬರಹಗಳಿಗೆ ಹಸ್ತಪ್ರತಿಗಳು ಎಂಬುದು ಮತ್ತೊಂದು ಹೆಸರು. ಕನ್ನಡದಲ್ಲಿ ಬರೆದಿಟ್ಟಿರುವ ಕಾವ್ಯ, ಶಾಸ್ತ್ರ, ಪುರಾಣಾದಿಗಳಿಗೆ ಕನ್ನಡ ಹಸ್ತಪ್ರತಿ ಎಂದು ಕರೆಯಬಹುದು."[1] ಹಸ್ತಪ್ರತಿಯನ್ನು ಇಂಗ್ಲಿಷಿನಲ್ಲಿ 'ಮ್ಯಾನುಸ್ಕ್ರಿಪ್ಟ್' ಎಂದು ಕರೆಯುತ್ತಾರೆ. ಇದು ಲಿಖಿತವೇ ಆದರೂ 2 ಬಗೆ ಇರುತ್ತದೆ ಎಂದು ಟಿ.ವಿ.ವೆಂ.ಶಾಸ್ತ್ರಿಗಳು ಹೇಳುತ್ತಾರೆ.[2] ಕೈಬರಹದಲ್ಲಿ ಬರೆದ ಪತ್ಯ ಎರಡು ಪ್ರಕಾರಗಳು

(1) ಹಸ್ತಪ್ರತಿಯೊಂದರ ಬೆಲೆಯಿಲ್ಲದ ಈಚಿನ ಪ್ರತಿಗಳು

(2) ಲಿಖಿತ ಗ್ರಂಥಗಳು

ಇವರ ದೃಷ್ಟಿಯಲ್ಲಿ ನಕಲುಪ್ರತಿಗಳು ಹಸ್ತಪ್ರತಿಯೊಂದರ ಬೆಲೆಯಿಲ್ಲದ ಈಚಿನ ಪ್ರತಿಗಳಾಗಿವೆ. ಒಂದು ಕಾವ್ಯದ ಹತ್ತಾರು ಪ್ರತಿಗಳಿದ್ದರೆ ಅನೇಕ ಪ್ರತಿಗಳು ಈ ಬಗೆಯವು ಎಂದರ್ಥ ಎನ್ನಬಹುದು. ಅಂದರೆ ಒಂದು ಕಥಾವಸ್ತು ಅಥವಾ ವಿಷಯದ ಹಸ್ತಪ್ರತಿ ಮೂಲಪ್ರತಿ ಅಥವಾ ಸಮಾನಪ್ರತಿ. ಅದರ ನಕಲುಗಳು ಅಥವಾ ಬಹು ಪ್ರತಿ.

"ಹಸ್ತಪ್ರತಿ ಪದ ಕನ್ನಡಿಗರು ಬಳಸಲು ಮೂಲಕಾರಣವನ್ನು ಬಿ.ಕೆ.ಹಿರೇಮಠರು ತಮ್ಮ 'ಕನ್ನಡ ಹಸ್ತಪ್ರತಿಗಳು – ಒಂದು ಅಧ್ಯಯನ' ಗ್ರಂಥದಲ್ಲಿ (ಪು.7–8) ಹೀಗೆ ತಿಳಿಸಿದ್ದಾರೆ.[3]

"ನಿಘಂಟುವಿನ ಅರ್ಥ: ಹಸ್ತಪ್ರತಿಯನ್ನು ಸೂಚಿಸಲು ಆಂಗ್ಲಭಾಷೆಯಲ್ಲಿ ಮ್ಯಾನ್ಯುಸ್ಕ್ರಿಪ್ಟ್, ಎಂಬ ಪದವನ್ನು ಬಳಸುತ್ತಾರೆ. 1597ರ ಸುಮಾರಿಗೆ ಇದನ್ನು ಮಧ್ಯಯುಗದ ಲ್ಯಾಟಿನ್ ಪದ ಮ್ಯಾನು (ಅಬಲೇಟೀವ್) ಬೈ ಹ್ಯಾಂಡ್+ಸ್ಕ್ರಿಫ್ಟ್ (ಪಾಸ್ಟ್‌ಆರ್ ಪಾಸೀವ್ ಪಾರ್ಟಿಸಿಪೇಟ್) ಆಫ್ ಸ್ಕ್ರಾಯಿಬೇರ್ ಟು ರೈಟ್ (ಅಡ್ಜೆಕ್ಟೀವ್) ರಿಟನ್ ಬೈ ಹ್ಯಾಂಡ್ ಎಂಬುದಾಗಿ ಆಕ್ಸ್‌ಫರ್ಡ್ ಶಬ್ದಕೋಶ ವಿವರಣೆ ನೀಡುತ್ತದೆ.[4] ಯೂರೋಪ್ ದೇಶಗಳಲ್ಲಿ ಕೈಬರಹ ಅರ್ಥದ 'ಮ್ಯಾನ್ಯುಸ್ಕ್ರಿಪ್ಟ್' ರೂಢಿಗೆ ಬರಲು ಕೈಬರಹವಲ್ಲದ ಇನ್ನೊಂದು ಬರಹ ಪದ್ಧತಿ ಅಸ್ತಿತ್ವಕ್ಕೆ ಬಂದುದೇ ಕಾರಣವಾಗಿರಬೇಕು. ಆ ಇನ್ನೊಂದು ಬರಹ ಪದ್ಧತಿಯೆಂದರೆ ಯಂತ್ರಗಳ ಮೂಲಕ ಬರಹವನ್ನು ಕೈವರ್ತಿಸಿಕೊಂಡುದುದು. ಆಗ ಯಂತ್ರಪ್ರತಿಗಳಿಂದ ಭಿನ್ನಗೊಳಿಸಿ ಕರೆಯಲು ಅವರು ಹಸ್ತಪ್ರತಿ ಅರ್ಥದ 'ಮ್ಯಾನ್ಯುಸ್ಕ್ರಿಪ್ಟ್' ಪದವನ್ನು ರೂಢಿಸಿದರು. ಈ 'ಮ್ಯಾನ್ಯುಸ್ಕ್ರಿಪ್ಟ್' ಎಂಬ ಪದವನ್ನು ಲಕ್ಷಿಸಿಯೇ ಕೈಯಿಂದ ಬರೆಯಲಾದ ಪ್ರತಿ ಎಂಬರ್ಥದಲ್ಲಿ 'ಹಸ್ತಪ್ರತಿ' ಎಂಬ ಪದವನ್ನು ಭಾರತೀಯರು ಕನ್ನಡಿಗರು ಬಳಕೆಗೆ ತಂದುಕೊಂಡಿರಬೇಕು.[5]

ಬ್ರಿಟಾನಿಕಾ ವಿಶ್ವಕೋಶದಲ್ಲಿ ಕೊಟ್ಟ ವಿವರಣೆ ಹೀಗಿದೆ.

"ಬ್ರಿಟಾನಿಕಾ ವಿಶ್ವಕೋಶವು ಬರಹಗಳೆಲ್ಲವನ್ನು ದಾಖಲೆಗಳು (Documents) ಎಂದು ಒಟ್ಟಾಗಿ ಗ್ರಹಿಸಿ "ಯಾವುದೇ ಒಂದು ಸಂಗತಿಯನ್ನು ನಿವೇದಿಸಲು ಅಥವಾ ದಾಖಲೆಗೊಳಿಸಿ ರಕ್ಷಿಸಲು ಶಾಶ್ವತವಾದ ಮತ್ತು ಬಿರುಸಾದ ಸಾಮಗ್ರಿಗಳ ಮೇಲೆ ಕೆತ್ತಿದುದನ್ನು ಶಾಸನ"ವೆಂದು ವಿವರಿಸಿದರೆ "ಮೃದುವಾದ ಸಮತಲದ ಸಸಿರಸ್, ಹದಮಾಡಿದ ಚರ್ಮಕಾಗದ ಮತ್ತು ಕಾಗದ ಇತ್ಯಾದಿ ಸಾಮಗ್ರಿಗಳ ಮೇಲೆ ವರ್ಣವನ್ನುಪಯೋಗಿಸಿಕೊಂಡು ಕುಂಚ, ಲೇಖನಿ ಇಲ್ಲವೆ ಅಲಗಿನಿಂದ ಬರೆಯಲಾದವುಗಳನ್ನು ಹಸ್ತಪ್ರತಿ" ಗಳೆಂದು ಗುರುತಿಸಿ ಇವು ಶಾಸನಗಳಿಂದ ಭಿನ್ನವಾದವುಗಳು" ಎನ್ನುತ್ತದೆ.[6]

ಶ್ರೀ.ಎಸ್.ಎಮ್.ಕತ್ರೆಯವರು "ಗ್ರಂಥಗಳನ್ನು ಹಲವಾರು ಪ್ರತಿಗಳನ್ನಾಗಿ ಪಡೆಯುವ ತಾಂತ್ರಿಕ ಸೌಲಭ್ಯವು ಇಲ್ಲದಂತಹ ಕಾಲದಲ್ಲಿ ಕೈಯಿಂದ ಬರೆಯಲಾದ ಮೂಲ ಮಾತೃಕೆ ಮತ್ತು ಅದನ್ನು ಎದುರಿಟ್ಟುಕೊಂಡು ಅಕ್ಷರಶಃ ಶಬ್ದಶಃ ಮಾಡಲಾದ ಅದೇ ಮಾತೃಕೆಯ ಮುಂದಿನ ಪ್ರತಿಗಳು ಇವೆಲ್ಲವನ್ನು ಒಟ್ಟಿಗೆ ಹಸ್ತಪ್ರತಿಗಳೆಂದು ಕರೆಯಲಾಗುತ್ತದೆ ಎನ್ನುತ್ತಾರೆ."[7]

**ಲಭ್ಯಪ್ರತಿಗಳ ಹಸ್ತಪ್ರತಿಸೂಚಿಗಳು:**

ಏಕೈಕ ಪ್ರತಿ ಇದ್ದಾಗ ಅದು ಮೂಲಪ್ರತಿ ಅಥವಾ ನಕಲು ಪ್ರತಿ ಆಗಿರಬಹುದು ಸಂಖ್ಯಾ ದೃಷ್ಟಿಯಿಂದ ನಕಲು ಪ್ರತಿ ಅಷ್ಟೆ. ಬಹುಪ್ರತಿಗಳಿದ್ದಾಗ ಅವು ಪೂರ್ಣ ಲಿಖಿತ ಪ್ರತಿ ಆಗಿರಬಹುದು ಅಥವಾ ಲಭ್ಯ ಪ್ರತಿ ಆಗಿರಬಹುದು. ಏಕಪ್ರತಿ ಬಹುಪ್ರತಿ ಎಂಬುದು ಸಂಖ್ಯಾ ದೃಷ್ಟಿಯಿಂದ ಹೇಳುವ ಮಾತು, ಪೂರ್ಣಪ್ರತಿ ಅಪೂರ್ಣಪ್ರತಿ ಎಂಬ ಮಾತು, ಕೃತಿಯ ವಸ್ತುವಿನ ದೃಷ್ಟಿಯಿಂದ ಹೇಳುವ ಮಾತು, ಇನ್ನು ಲಭ್ಯಪ್ರತಿ ಅಲಭ್ಯಪ್ರತಿ ಎಂಬ ಮಾತಿದೆ. ಅದು ಏಕಪ್ರತಿ ಆಗಿರಬಹುದು ಅಥವಾ ನಕಲುಪ್ರತಿ ಆಗಿರಬಹುದು.

ಲಭ್ಯ ಪ್ರತಿಗಳಲ್ಲಿ ಹೆಸರು ಉಲ್ಲೇಖಿತವಾದ ಪ್ರತಿಗಳು ಅಥವಾ ಕಾವ್ಯದ ಕೆಲವು ಭಾಗಗಳನ್ನು ಉದ್ಧರಿಸಿದ ಕಾವ್ಯದ 'ಪ್ರತಿಗಳು ಅಥವಾ ಇನ್ನೂ ಅಜ್ಞಾತವಾಗಿ ಉಳಿದಿರುವ ನಮಗೆ ಸಿಗದಿರುವ ಪ್ರತಿಯೂ ಅಲಭ್ಯ ಪ್ರತಿ ಎನಿಸಿಕೊಳ್ಳುತ್ತದೆ. ಸೂಚೀಕಾರ್ಯ ನಡೆದಾಗ ಬೇರೆ ಬೇರೆ ಸ್ಥಳಗಳ ಸೂಚಿಗಳನ್ನು ಹೋಲಿಸಿದಾಗ ಅಲಭ್ಯ ಪ್ರತಿಗಳು ಅಥವಾ ಅಲಭ್ಯ ಭಾಗಗಳು ಲಭ್ಯವೆನಿಸಬಹುದು ನಮ್ಮ ವರ್ಣನಾತ್ಮಕ ಸೂಚಿಗಳು ಸಿಕ್ಕಿರುವ ಪ್ರತಿಗಳ ಸೂಚಿ ಆಗಿರುತ್ತವೆ. ಗ್ರಂಥಗಳಲ್ಲಿ ಉಲ್ಲೇಖಿಸಿರುವ ಅಥವಾ ಉದ್ಧರಿಸಿರುವ ಗ್ರಂಥಗಳ ಸೂಚಿ ಆಗಿರುವುದಿಲ್ಲ. ಉದಾಹರಣೆಗೆ "ಈವರೆಗೂ ಹಿಂದಿನ ಕನ್ನಡ ಗ್ರಂಥಗಳ ಅನೇಕ ಹಸ್ತಪ್ರತಿಗಳನ್ನು ಅವುಗಳ ಮಾತೃಕೆಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿದ್ದರೂ ಕವಿರಾಜ ಮಾರ್ಗಕಾರನು ಉಲ್ಲೇಖಿಸಿದ ಗದ್ಯಪದ್ಯಕಾರರ ಕೃತಿಗಳು, ಚೂಡಾಮಣಿ ಎಂಬ ವ್ಯಾಖ್ಯಾನ ಗ್ರಂಥ, ಪೊನ್ನನ ಭುವನೈಕರಾಮಾಭ್ಯುದಯ, ಒಂದನೆಯ ಗುಣವರ್ಮನ ಹರಿವಂಶ ಮತ್ತು ಶೂದ್ರಕ ಹೀಗೆ ಹಲವಾರು ಗ್ರಂಥಗಳು ನಮಗೆ ದೊರೆತಿಲ್ಲ. ಹರಿಹರನ ಬಸವರಾಜದೇವರಗಳೆಯಂಥ ಮಹತ್ವದ ಚಾರಿತ್ರಿಕ ಕೃತಿ ಅಪೂರ್ಣವಾಗಿಯೇ ಉಪಲಬ್ಧವಾಗಿದೆ. ಹೀಗೆ ಅಪೂರ್ಣವಾದ ಕೃತಿಗಳ, ಅಲಭ್ಯ ಕೃತಿಗಳ ಆದೇ ಹೆಸರು ಇತ್ಯಾದಿ ಮಾಹಿತಿ ಸಿಕ್ಕ ಕೃತಿಗಳ ಸೂಚಿ ಪ್ರಕಟವಾಗಿಲ್ಲ".[8] ಏನಿದ್ದರೂ ಪೂರ್ಣಗ್ರಂಥವಿರಲಿ ಅಪೂರ್ಣ ಗ್ರಂಥವಿರಲಿ, ಏಕಪ್ರತಿ ಇರಲಿ, ಬಹುಪ್ರತಿ ಇರಲಿ, ಸಿಕ್ಕಿರುವ ಓಲೆಗರಿ ಕಾಗದ ಪ್ರತಿಗಳ ಸೂಚಿಗಳು ಇಂದು ಸಿದ್ಧವಾಗಿವೆ. ಇಂಥ ಸೂಚಿಗಳು ಮುಖ್ಯವಾಗಿ ತಾಳೆಗರಿ-ಕಾಗದ ಪ್ರತಿಗಳನ್ನು ಸಂಗ್ರಹಿಸಿರುವ ಖಾಸಗಿ ವ್ಯಕ್ತಿಗಳು ಅಥವಾ ಖಾಸಗಿ ಸಂಸ್ಥೆಗಳು ಅಥವಾ ವಿಶ್ವವಿದ್ಯಾಲಯಗಳು ಇಲ್ಲವೇ ಸರ್ಕಾರಿ ಸಂಸ್ಥೆಗಳು ಸಿದ್ಧಪಡಿಸಿ ಪ್ರಕಟಿಸಿರುವ ಸೂಚಿಗಳಾಗಿವೆ. ಉದಾಹರಣೆಗೆ, ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು ಮತ್ತು ಅಲಿಗೆ ಮೇಲಣ ಮನೆಯ ಹಸ್ತಪ್ರತಿಗಳು ಸೂಚಿಯನ್ನು ಎ.ಆರ್.ಗುರು ಅವರು ಸಂಪಾದಿಸಿದ್ದಾರೆ.[9] ಇದು ವ್ಯಕ್ತಿ ಸಂಪಾದಿತ ಸೂಚಿಗೆ ಸಾಕ್ಷಿಯಾಗಿದೆ. ಆದರೆ ಖಾಸಗಿ

ಸಂಸ್ಥೆಗಳ ಹಸ್ತಪ್ರತಿ ಸೂಚಿಗಳುಂಟು ಇದಕ್ಕೆ ನಿದರ್ಶನ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ–1.[10] ಮೂರನೆಯದು ವಿಶ್ವವಿದ್ಯಾನಿಲಯಗಳು ಪ್ರಕಟಿಸಿರುವ ಸೂಚಿಗಳು ಉದಾಹರಣೆ:– ಕನ್ನಡ ವಿಶ್ವವಿದ್ಯಾಲಯ ಹಂಪಿ ಪ್ರಕಟಿಸಿರುವ 'ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿಗಳು.[11] ಸರ್ಕಾರಿ ಸಂಸ್ಥೆಗಳು ಪ್ರಕಟಿಸಿರುವ ಸೂಚಿಗಳು ಇವೆ. ಉದಾಹರಣೆ: ಮ್ಯಾನುಸ್ಕ್ರಿಪ್ಟ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿ ಮದ್ರಾಸ್ ಸಂಪುಟಗಳು.[12] ಇವುಗಳೆಲ್ಲದರ ಪಟ್ಟಿಯನ್ನು ಅನುಬಂಧದಲ್ಲಿ ಕಾಣಬಹುದು ಹೀಗೆ ವ್ಯಕ್ತಿ, ಖಾಸಗಿ, ಸರ್ಕಾರಿ ವಿಶ್ವವಿದ್ಯಾಲಯಗಳ ಸೂಚಿಗಳು 4 ಬಗೆಯಾಗಿವೆ ಎಂಬ ಸಂಗತಿಯನ್ನು ಗಮನಿಸುವುದು ಮುಖ್ಯ. ಏಕೆಂದರೆ ನಮ್ಮಲ್ಲಿ ಸೂಚಿ ಇತಿಹಾಸವನ್ನು ರಚಿಸುವಲ್ಲಿ ಈ 4 ಬಗೆಯವರೂ ಮುಖ್ಯಪಾತ್ರ ವಹಿಸಿದ್ದಾರೆ ಮತ್ತು ಸೂಚೀಕರಣ ಪದ್ಧತಿಯಲ್ಲಿ ಇವರು ತಂತಮ್ಮದೇ ಆದ ಕ್ರಮವನ್ನು ಅನುಸರಿಸಿದ್ದಾರೆ.

**ಹಸ್ತಪ್ರತಿ ಶಾಸ್ತ್ರದ ಪಂಚಾಂಗಗಳು:**

ಹಸ್ತಪ್ರತಿಶಾಸ್ತ್ರವನ್ನು ಮುಖ್ಯವಾಗಿ ಐದು ಅಂಗಗಳಾಗಿ ಕಲಬುರ್ಗಿ ಅವರು ವಿಂಗಡಿಸಿದ್ದಾರೆ. ೧) ಉತ್ಪಾದಕ ೨) ಪ್ರಸರಣ ೩)ಸಂಗ್ರಹಣ ೪)ವ್ಯವಸ್ಥಾಪನ ೫) ಪ್ರಯೋಜನ. ಈ ೫ ಅಂಗಗಳಲ್ಲಿ ಅವರು ಸಮಾವೇಶಗೊಳಿಸಿರುವ ವಿಷಯಗಳು ಹೀಗಿವೆ.[13]

1)ಉತ್ಪಾದನ: ಕೃತಿ–ಪ್ರತಿ–ಕಟ್ಟು, ಲೇಖನಸಾಮಗ್ರಿ, ತಾಳೆಗರಿ–ಕಾಗದ–ಅರಿವೆ. ಹಲಗೆ–ಚರ್ಮ, ಕಂಠ–ಲೇಖನಿ, ಕಪ್ಪು–ಮಸಿ–ಬಳಪ, ಲಿಪಿಗಾರ–ಲಿಪಿ–ಭಾಷೆ, ಗ್ರಂಥ ವಿನ್ಯಾಸ.

2) ಪ್ರಸರಣ: ವೈದಿಕ–ಜೈನ–ವೀರಶೈವ ಪ್ರಾಚೀನ ಹಸ್ತಪ್ರತಿಭಂಡಾರಗಳು: ಜೈನ ಹಸ್ತಪ್ರತಿ ಭಂಡಾರಗಳು – ವೀರಶೈವ ಹಸ್ತಪ್ರತಿಭಂಡಾರಗಳು – ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು.

3) ಸಂಗ್ರಹಣ: ಸಂಗ್ರಹ ವಿಧಾನ – ಸಂಗ್ರಹದ ಇತಿಹಾಸ – ಆಧುನಿಕ ಹಸ್ತಪ್ರತಿ ಸೂಚಿಗಳು

4) ವ್ಯವಸ್ಥಾಪನ: ಆಕರಣ ವಿಭಾಗ–ತಾಂತ್ರಿಕ ವಿಭಾಗ–ಸಂಪತ್ತು ವಿಭಾಗ–ಗ್ರಂಥ ಸಂಪಾದನ ವಿಭಾಗ–ಗ್ರಂಥ ಪರಿಚಲನ ವಿಭಾಗ–ಅಧ್ಯಯನ ವಿಭಾಗ–ಗ್ರಂಥಾಲಯ ವಿಭಾಗ–ಯಂತ್ರೋಪಕರಣ ವಿಭಾಗ–ಪ್ರದರ್ಶನ ವಿಭಾಗ–ಸಮಾಲೋಚನ ವಿಭಾಗ–ಸಭಾಗೃಹ ವಿಭಾಗ–ವಿಶ್ರಾಂತಿ ವಿಭಾಗ.

5) ಪ್ರಯೋಜನ : ಮುಂದೇನು? ಸಂಗ್ರಹಣ–ಸಂರಕ್ಷಣೆ–ಹಸ್ತಪ್ರತಿಶಾಸ್ತ್ರದ ಅಳವಡಿಕೆ–ಗ್ರಂಥ ಸಂಪಾದನ ಪ್ರಶಸ್ತಿ ಸಂಗ್ರಹ – ಹಸ್ತಪ್ರತಿ ಭಂಡಾರದ ನವೀಕರಣ–ಹಸ್ತಪ್ರತಿ ಅಧ್ಯಯನ ತರಬೇತಿ –ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ.

ಹಸ್ತಪ್ರತಿಗಳ ಸೂಚಿ ಸಿದ್ಧತೆ ಎರಡು ಬಗೆಯಲ್ಲಿ ನಡೆಯುತ್ತದೆ. ಒಂದು ಹಸ್ತಪ್ರತಿಗಳನ್ನು ಸಂಗ್ರಹಿಸಿ ತಂದು ಒಂದೆಡೆ ಭಂಡಾರದ ಸ್ಥಾಪನೆ ಮಾಡಿದ ಕಡೆ ನಡೆಯುತ್ತದೆ. ಇನ್ನೊಂದು ಹಸ್ತಪ್ರತಿಗಳು ಖಾಸಗಿಯಲ್ಲಿ ಇದ್ದಕಡೆ. ಕೆಲವೊಮ್ಮೆ ಸಂಗ್ರಹಕಾರರು ತಾವೇ ಸೂಚಿ ಮಾಡಿಕೊಳ್ಳುವುದು ಉಂಟು. ಮತ್ತೆ ಕೆಲವೆಡೆ ಸೂಚಿ ಮಾಡಲು ಪ್ರತ್ಯೇಕವಾಗಿ ಸೂಚೀಕಾರರು ಇರುತ್ತಾರೆ. ಲಿಪಿಕಾರರು ಇದ್ದಂತೆ, ವ್ಯವಸ್ಥಿತ ಪುಸ್ತಕ ಭಂಡಾರಗಳಲ್ಲಿ ಸೂಚೀಕರಣಕ್ಕೆ ಪ್ರತ್ಯೇಕ ಸಿಬ್ಬಂದಿಯೇ ಇರುತ್ತದೆ. ಆಧುನಿಕ ಸೂಚೀ ಪದ್ಧತಿ ಸಂಕೀರ್ಣವಾಗಿದ್ದು ಅದಕ್ಕೆ ತರಬೇತಿ ಬೇಕಾಗುತ್ತದೆ. ಒಂದು ಪುಸ್ತಕ ಯಾವ ವರ್ಗಕ್ಕೆ ಸೇರುತ್ತದೆ. ಎಂಬುದನ್ನು ನಿರ್ಧರಿಸುವುದು ಸುಲಭವಿಲ್ಲ. ಅಚ್ಚಿನ ಪುಸ್ತಕಗಳ ಸೂಚಿ ತಯಾರಿಕೆಗೂ ಹಸ್ತಪ್ರತಿ ಸೂಚಿ ತಯಾರಿಕೆಗೂ ಬಹಳ ವ್ಯತ್ಯಾಸಗಳಿವೆ. ಈಚಿನ ಅಚ್ಚಿನ ಗ್ರಂಥಗಳ ಸೂಚಿ ತಯಾರಿಸಲು ಭಾಷೆ ಬರಬೇಕಿಲ್ಲ ಆಧುನಿಕ ವ್ಯವಸ್ಥೆಯಲ್ಲಿ ಪ್ರತಿ ಪುಸ್ತಕದ ವಿವರಗಳನ್ನು ಆಯಾ ಭಾಷೆಗಳಲ್ಲಿ ಇರುವುದರ ಜೊತೆಗೆ ಇಂಗ್ಲಿಷಿನಲ್ಲಿ ಇರುತ್ತದೆ. ಹೀಗಾದಾಗ ಭಾಷಾ ಕಷ್ಟವಿಲ್ಲ.ಮತ್ತೆ ಕೃತಿ ಸೂಚಿ, ಲೇಖಕಸೂಚಿ, ವಿಷಯ ಸೂಚಿ ಎಂದು ಅಚ್ಚಿನ ಗ್ರಂಥ ಸೂಚಿಗಳನ್ನು 3 ತೆರನಾಗಿ ಸಿದ್ಧಪಡಿಸುತ್ತಾರೆ. ಆದರೆ ಹಸ್ತಪ್ರತಿಸೂಚಿಗಳ ಬಹುತೇಕ ಅನೇಕ ಸೂಚಿಗಳಲ್ಲಿ ಅಕಾರಾದಿಯಾಗಿ ಅಥವಾ ವಿಷಯಾನುಸಾರ ಹಸ್ತಪ್ರತಿ ಸೂಚಿ ಇರುತ್ತದೆ. ಲೇಖಕ ಸೂಚಿ ಕೃತಿ ಸೂಚಿಗಳ ಅಕಾರಾದಿ ಇರುವುದಿಲ್ಲ. ಉದಾಹರಣೆ: ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ–ಸಂಪುಟ (ಸಂ.ಹೆಚ್.ದೇವೀರಪ್ಪ.ಪ್ರಾಚ್ಯ ಸಂಶೋಧನಾಲಯ 1983) ಅಕಾರಾದಿಕ್ರಮದಲ್ಲಿ ಹಸ್ತಪ್ರತಿಗಳ ವಿವರಗಳು ಮಾತ್ರ ಇದೆ. ಆದರೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿಯಲ್ಲಿ ಗ್ರಂಥಗಳ ವಿವರಣಾತ್ಮಕ ಸೂಚಿಯನ್ನು ಅಕಾರಾದಿಯಾಗಿ ಕೊಟ್ಟ ಮೇಲೆ ಅನುಬಂಧವಾಗಿ ಕವಿಸೂಚಿ. ಹಸ್ತಪ್ರತಿ ಲಿಪಿಕಾರರ ಸೂಚಿ, ಲಿಪಿಕಾರರ ಸ್ಥಳನಾಮ ಸೂಚಿ, ಹಸ್ತಪ್ರತಿ ದಾನಿಗಳ ಸೂಚಿ, ಕೊಡಲಾಗಿದೆ. ಇವುಗಳ ಜತೆಗೆ ವಿಷಯದ ಕೃತಿ ಸೂಚಿಯ ಪಟ್ಟಿಯನ್ನು ಅನುಕ್ತ ಕವಿಚರಿತೆ ಗ್ರಂಥಗಳ ಸೂಚಿ ಇತ್ಯಾದಿ ಕೊಟ್ಟಿದ್ದರೆ ಉಪಯುಕ್ತವೆನಿಸುತ್ತಿತ್ತು. ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ ಸೂಚಿಗಳಲ್ಲಿ ಲೇಖಕರ ಸೂಚಿ ಮತ್ತು ವಿಷಯವಾರು ಗ್ರಂಥ ಸೂಚಿ ಕೊಟ್ಟಿರುವುದು ಉಪಯುಕ್ತವಾಗಿದೆ. ಕನ್ನಡ ಅಧ್ಯಯನ ಪೀಠದ ಸೂಚಿಗಳಲ್ಲಿ ಇವಾವುವು ಇಲ್ಲ. ಕೇವಲ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯಷ್ಟೆ ಇದೆ. ಇವುಗಳನ್ನು ಕಂಡಾಗ, "ಆಧುನಿಕ ಹಸ್ತಪ್ರತಿ ಭಂಡಾರಗಳು

ಸೂಚೀ ರಚನೆಯನ್ನು ಒಂದು ಶಿಸ್ತನ್ನಾಗಿ ರೂಢಿಸಿವೆಯಾದರೂ ಈ ಸೂಚೀ ತಯಾರಿಕೆಯಲ್ಲಿ ಒಂದೊಂದು ಸಂಸ್ಥೆ ಒಂದೊಂದು ರೀತಿಯ ಕ್ರಮವನ್ನು ಅನುಸರಿಸಿವೆ"[14] ಎಂಬ ಮಾತು ನಿಜ.

ಪ್ರಸ್ತುತ ಹಸ್ತಪ್ರತಿ ಸೂಚಿಗಳ ವಿಷಯ ಮುಖ್ಯವಾಗಿರುವುದರಿಂದ ಅಚ್ಚಿನ ಪುಸ್ತಕಗಳ ಸೂಚಿ ಬಗ್ಗೆ ಇಲ್ಲಿ ಹೆಚ್ಚಾಗಿ ಪ್ರಸ್ತಾಪ ಮಾಡುತ್ತಿಲ್ಲ. ಅಚ್ಚಿನ ಪುಸ್ತಕಗಳ ಸಂಗ್ರಹದ ರೀತಿ ಬೇರೆ, ಹಸ್ತಪ್ರತಿ ಸಂಗ್ರಹದ ರೀತಿ ಬೇರೆಬೇರೆ. ಅಚ್ಚಿನ ಪ್ರತಿಗಳು ದೊರೆಯುವ ಬಗ್ಗೆ ಸಾಕಷ್ಟು ಮಾಹಿತಿ ಪತ್ರಿಕೆಗಳಲ್ಲಿ, ಪ್ರಚಾರಕರ ಪ್ರಕಟನೆಗಳಲ್ಲಿ, ಮಾರಾಟದ ಅಂಗಡಿಗಳಲ್ಲಿ, ಪುಸ್ತಕಗಳಿಗಾಗಿ ಇರುವ ನಿಯತಕಾಲಿಕೆಗಳಲ್ಲಿ ಸಿಗುತ್ತವೆ. ಆದರೆ ಹಸ್ತಪ್ರತಿ ವಿಚಾರ ಹಾಗಲ್ಲ. ಸೂಚಿ ತಯಾರಿಕೆಗೆ ಹಸ್ತಪ್ರತಿ ಸಂಗ್ರಹಿಸಿದ ಭಂಡಾರಗಳ ನೆರವು ಬೇಕು ಇಲ್ಲವೇ ಖಾಸಗಿ ವ್ಯಕ್ತಿಗಳ ಸಂಗ್ರಹಣದ ನೆರವು ಬೇಕು. ವ್ಯಕ್ತಿ, ಮಠಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಇರುವ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ. ವ್ಯವಸ್ಥಿತ ಜೋಡಣೆ ಹಸ್ತಪ್ರತಿ ಸೂಚಿ ತಯಾರಿಕೆಗೆ ಆಧಾರಪ್ರಾಯವಾದ ಆಕರಗಳು ಬೇಕು. ಸಂಗ್ರಹ ಕಾರ್ಯದಲ್ಲಿ ಅತಿಮುಖ್ಯವಾದುದು ಕ್ಷೇತ್ರಕಾರ್ಯ. ಕ್ಷೇತ್ರಕಾರ್ಯಕ್ಕೂ ಸೂಚೀಕರಣಕ್ಕೂ ಸಂಬಂಧವಿದೆ. ಎಷ್ಟೋ ವೇಳೆ ಖಾಸಗಿ ವ್ಯಕ್ತಿಗಳು ಹಸ್ತಪ್ರತಿಗಳನ್ನು ಕೊಡುವುದಿಲ್ಲ ಅಲ್ಲಿಯೇ ಸೂಚಿಕಾರ್ಯ ನಡೆಸಬೇಕಾಗುತ್ತದೆ. ಕ್ಷೇತ್ರಕಾರ್ಯದ ಬಗ್ಗೆ ಕ್ಷೇತ್ರಕಾರ್ಯಕರ್ತ, ಹಸ್ತಪ್ರತಿ ಮತ್ತು ಹಸ್ತಪ್ರತಿ ಒಡೆಯ ಎಂಬ 3 ಘಟಕಗಳ ಬಗ್ಗೆ ಎಂ.ಎಂ.ಕಲಬುರ್ಗಿ ಅವರು ಕನ್ನಡ ಹಸ್ತಪ್ರತಿ ಶಾಸ್ತ್ರಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದಾರೆ. (ಪುಟ68–75) ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳೇ ಸೂಚೀಕರಣಕ್ಕೆ ಮುಖ್ಯ ಆಧಾರ.

**ಹಸ್ತಪ್ರತಿ ಸಂಗ್ರಹ ಭಂಡಾರಗಳ ಮಹತ್ವ:**

ಕನ್ನಡ ಹಸ್ತಪ್ರತಿ ಸೂಚೀಕಾರ್ಯಕ್ಕೆ ತೊಡಗುವವರಿಗೆ ಕನ್ನಡ ಹಸ್ತಪ್ರತಿಗಳು ಎಲ್ಲೆಲ್ಲಿವೆ ಎಂಬ ಮಾಹಿತಿ ಮುಖ್ಯ. ಏಕೆಂದರೆ ಒಂದು ಪ್ರತಿ ಒಂದು ಭಂಡಾರದಲ್ಲಿ ಅಪೂರ್ಣವಿದ್ದರೆ ಅದರ ಪೂರ್ಣ ಪ್ರತಿ ಹುಡುಕಲು, ಅಶುದ್ಧ ಪಾಠದ ಪ್ರತಿ ಇದ್ದರೆ ಶುದ್ಧಪಾಠದ ಪ್ರತಿ ಹುಡುಕಲು ಇತ್ಯಾದಿ ಹತ್ತಾರು ಮಾಹಿತಿಗಳಿಗಾಗಿ ಬೇರೆ ಬೇರೆ ಹಸ್ತಪ್ರತಿ ಭಂಡಾರಗಳು ಎಲ್ಲಿವೆ? ಅವುಗಳಲ್ಲಿ ಏನಿದೆ? ಎಂಬೆಲ್ಲಾ ಮಾಹಿತಿಗಳು ಅಗತ್ಯವಾಗಿರಬೇಕು. ವಿಶೇಷವಾಗಿ ಸೂಚೀಕರಣದವರಿಗಿಂತಲೂ ಸಂಶೋಧಕರಿಗೆ, ಗ್ರಂಥ ಸಂಪಾದನಕಾರರಿಗೆ, ಈ ಮಾಹಿತಿಯನ್ನು ಸೂಚಿಮಾಡುವವರಿಗೆ, ಈ ಹಸ್ತಪ್ರತಿ ಭಂಡಾರಗಳ ಮಾಹಿತಿ ಅಗತ್ಯವಿದೆ. ಸೂಚೀ ಗ್ರಂಥಗಳನ್ನು ಇತರ ಭಂಡಾರದವರು ಪ್ರಕಟಿಸಿದ್ದರೆ. ಅವುಗಳಲ್ಲಿ ಅವರು ಅನುಸರಿಸಿರುವ ವಿಧಾನವೇನು? ತಾವು ಯಾವ ವಿಧಾನ ಅನುಸರಿಸಬೇಕು? ಎಂಬುದನ್ನು

ತಿಳಿಯಲು ಅನುಕೂಲವಾಗುತ್ತದೆ. ಈ ದೃಷ್ಟಿಯಿಂದ ಹಸ್ತಪ್ರತಿ ಭಂಡಾರಗಳ ಇತಿಹಾಸವನ್ನು ವಿವರವಾಗಿ ತಿಳಿಯುವುದು ಅಗತ್ಯವಿದೆ.

**ಹಸ್ತಪ್ರತಿ ಭಂಡಾರಗಳ ಇತಿಹಾಸ:**

ಹಸ್ತಪ್ರತಿ ಭಂಡಾರಗಳ ಇತಿಹಾಸ, ಖಾಸಗಿ ಭಂಡಾರಗಳ ಇತಿಹಾಸ, ಸರ್ಕಾರಿ ಭಂಡಾರಗಳ ಇತಿಹಾಸವೆಂದು ಕೆಲವರು ಅಧ್ಯಯನ ಮಾಡಿದ್ದಾರೆ.[1] ಮತ್ತೆ ಕೆಲವರು ಕರ್ನಾಟಕದ ಒಳಗಿನ ಭಂಡಾರಗಳು ಮತ್ತು ಹೊರಗಿನ ಭಂಡಾರಗಳು ಎಂದು ಪರಿಶೀಲಿಸಿದ್ದಾರೆ.[2] ಕಾಲಾನುಕ್ರಮಣಿಕೆಯಲ್ಲಿ ಭಂಡಾರಗಳನ್ನು ಕೆಲವರು ಗಮನಿಸಿದ್ದಾರೆ.[3] ಒಟ್ಟಿನಲ್ಲಿ ಅವರೆಲ್ಲರು ಗಮನಿಸಿದ ಭಂಡಾರಗಳನ್ನು ಕುರಿತು ಸಂಕ್ಷಿಪ್ತವಾಗಿ ಇಲ್ಲಿ ಕೆಲವು ಸಂಗತಿಗಳನ್ನು ಹೇಳಿದೆ.

**ಪ್ರಥಮ ಪ್ರಯತ್ನ:**

"ಭಾರತದಲ್ಲಿ ಯುರೋಪಿಯನ್ನರು ಬಂದು ನೆಲೆಗೊಂಡು ಈ ದೇಶದ ಶಾಸನ, ಸಾಹಿತ್ಯ, ಕಲೆ, ಮುಂತಾದ ಸಾಂಸ್ಕೃತಿಕ ಪರಂಪರೆಗಳಲ್ಲಿ ಆಸಕ್ತಿಯನ್ನು ತಾಳಿ ಶಾಸನಾದಿ ಪ್ರಾಚ್ಯವಸ್ತು ಸಂಗ್ರಹಣದೊಂದಿಗೆ ಹಸ್ತಪ್ರತಿ ಸಂಗ್ರಹಣ ಕಾರ್ಯವನ್ನು ಕೈಗೊಳ್ಳುವ ಅವಧಿವರೆಗೂ ಅಂದರೆ ಸುಮಾರು 19ನೆಯ ಶತಮಾನದವರೆಗೂ ಭಾರತದಲ್ಲಿನ ಮಠಮಾನ್ಯ, ದೇವಸ್ಥಾನಗಳಲ್ಲಿ, ಪಂಡಿತರ ಆಶ್ರಯದಲ್ಲಿ ಹಸ್ತಪ್ರತಿಗಳು ಸಂಗ್ರಹಗೊಂಡು ಬಂದಿದ್ದವು. ಹೀಗೆ ಹಿಂದಿನವರು ವಿಶ್ವಾಸ ಶ್ರದ್ಧೆಗಳಿಂದ ಸಂಗ್ರಹಿಸಿಕೊಂಡು ಬಂದಿದ್ದ ಗ್ರಂಥಭಂಡಾರಗಳ ವಿಷಯದಲ್ಲಿ ನಾವು ಆಗಾಗ ತಳೆಯುತ್ತಲಿದ್ದ ಅನಾದರಣೆಯ ವಿರುದ್ಧವಾಗಿ ಯುರೋಪಿಯನ್ನರು ಈ ಬಗ್ಗೆ ತಾಳುತ್ತಿದ್ದ ಆಸಕ್ತಿಯು ಹಸ್ತಪ್ರತಿಯ ಸಂಗ್ರಹಣಕ್ಕೆ ಹೊಸ ತಿರುವನ್ನೇ ಕೊಟ್ಟಿತು. 1897ರ ಹೊತ್ತಿಗೆ ಹಸ್ತಪ್ರತಿಗಳ ಸೂಚೀಪ್ರಕಟಿಸಿದ್ದನ್ನು ಗಮನಿಸಿದರೆ ಇದಕ್ಕೂ ಪೂರ್ವದಲ್ಲಿ ಅಂದರೆ 18ನೆಯ ಶತಮಾನದ ಉತ್ತರಾರ್ಧದಲ್ಲಿಯೇ ಹಸ್ತಪ್ರತಿ ಸಂಗ್ರಹಣ ಪ್ರಾರಂಭವಾಗಿರುವುದು ಗೊತ್ತಾಗುತ್ತದೆ. ಹಸ್ತಪ್ರತಿ ಸಂಗ್ರಹಣ ಹಾಗೂ ಹಸ್ತಪ್ರತಿ ಸೂಚಿಗಳನ್ನು ರಚಿಸುವ ಈ ಕಾರ್ಯವನ್ನು ಅಂದು ಕ್ರಿಟಿಕಲ್ ಸ್ಕಾಲರ್‌ಷಿಪ್ ಎಂದು ಗುರುತಿಸಿದ್ದರು. ಕೆಲಕಾಲ ಬಂಗಾಲದ ಏಷಿಯಾಟಿಕ್ ಸಂಸ್ಥೆಯ ಅಧ್ಯಕರಾಗಿದ್ದ ಸರ್.ರೊಬರ್ಟ್‌ಚೇಂಬರ್ಸ್ ಅವರು 1774ರಿಂದ 1779ರವರೆಗೆ ಭಾರತೀಯ ಗ್ರಂಥಗಳನ್ನು ಸಂಗ್ರಹಿಸಿ ಒಂದು ಭಂಡಾರವನ್ನೇ ರೂಪಿಸಿದ್ದರು. ಅಮೂಲ್ಯವಾದ ಈ ಸಂಗ್ರಹವನ್ನು ಪರ್ಷಿಯನ್ ಸರಕಾರವು 1842ರಲ್ಲಿ ಖರೀದಿಸಿ ಬರ್ಲಿನ್‌ನ ಇಂಪೀರಿಯಲ್ ಲೈಬ್ರರಿ ಸಂಗ್ರಹಕ್ಕೆ ಸೇರ್ಪಡೆಗೊಳಿಸಿದ ಸಂಗತಿಯು ತಿಳಿದು ಬರುತ್ತದೆ. ಇದು ಅಷ್ಟು ಹಿಂದೆಯೇ ನಡೆದ ಹಸ್ತಪ್ರತಿ ಸಂಗ್ರಹದ ಒಂದು

ನಿದರ್ಶನವಾಗಿದೆ."[15]

ಮುಂಬಯಿ ರಾಜ್ಯಸರಕಾರವು 1866ರಷ್ಟು ಹಿಂದೆಯೇ ಹಸ್ತಪ್ರತಿಗಳನ್ನು ಕೊಳ್ಳಲು ಹಣ ಮಂಜೂರುಮಾಡಿ ಡಾ.ಬ್ಯುಲರ್ ಅವರಿಗೆ ಕೊಡುವುದರ ಮೂಲಕ ಈ ನಿಟ್ಟಿನಲ್ಲಿ ಸಹಕರಿಸಿತ್ತು. ಇವರು 1866–68ರ ಅವಧಿಯಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳ ಸಂಗ್ರಹವೇ ಮುಂದೆ ಭಂಡಾರಕರ್ ಓರಿಯಂಟಲ್ ರಿಸರ್ಚ್ ಸಂಸ್ಥೆಯಾಯಿತು. ಕರ್ನಾಟಕದಲ್ಲಿಯೂ ಹೆಚ್ಚು ಕಡಿಮೆ ಇದೇ ಅವಧಿಯಲ್ಲಿ ಹಸ್ತಪ್ರತಿಗಳ ಸಂಗ್ರಹಣ ಕಾರ್ಯವು ನಡೆದುದು ಕಂಡುಬರುತ್ತದೆ. ಇಲ್ಲಿಯ ದೇವಸ್ಥಾನಾದಿ ಧಾರ್ಮಿಕ ಸಂಸ್ಥೆಗಳಲ್ಲಿ ಹಾಗೂ ವ್ಯಕ್ತಿಗಳಲ್ಲಿ ಸಂಗ್ರಹಗಳಿದ್ದವು. ಅವರು ಹಸ್ತಪ್ರತಿಗಳನ್ನು ಪರಂಪರಾಗತವಾಗಿ ಕಾಪಾಡಿಕೊಂಡು ಬರುತ್ತಿದ್ದರು. "1782ರ ಸುಮಾರಿಗೆ ಮದ್ರಾಸ್ ಪ್ರಾಂತಕ್ಕೆ ಎಂಜನೀಯರ್ ಆಗಿ ಕರ್ನಲ್ ಮೆಕೆಂಜೆ ಬಂದರು. ಪ್ರಾಚ್ಯ ವಸ್ತು ಸಂಗ್ರಹ ಕಾರ್ಯದಲ್ಲಿ ವಿಶೇಷಾಸಕ್ತಿಯಿದ್ದ ಈ ಅಧಿಕಾರಿಯು 1796ರಿಂದ ಇವುಗಳ ಸಂಗ್ರಹವನ್ನು ಮಾಡತೊಡಗಿದರು.

ಈ ಭಾಗದ ಧಾರ್ಮಿಕ ಕ್ಷೇತ್ರಗಳಾದ ದೇವಾಲಯ, ಮಠ, ವಿದ್ಯಾಕೇಂದ್ರ ಪಂಡಿತರುಗಳ ಮನೆ ಮುಂತಾದ ನೆಲೆಗಳಲ್ಲಿದ್ದ ಮತ್ತು ಅಲ್ಲಲ್ಲಿ ಅಲಕ್ಷ್ಯಕ್ಕೆ ಗುರಿಯಾಗಿದ್ದ ಹಸ್ತಪ್ರತಿಗಳನ್ನು ಸಂಚಯಿಸಿದ ಕರ್ನಲ್ ಮೆಕೆಂಜಿಯು ಕನ್ನಡ ಹಸ್ತಪ್ರತಿ ಸಂಗ್ರಹಣ ಕಾರ್ಯಕ್ಕೆ ನಾಂದಿಹಾಡಿದರು. ಈತನ ಸಹಾಯಕರಾಗಿ ಚಾವಲಿಬೋರಯ್ಯ, ವೆಂಕಟಲಕ್ಷ್ಮಯ್ಯ, ಧರ್ಮಯ್ಯ, ನಾರಾಯಣರಾವ್, ಮತ್ತು ರಾಮದಾಸ್. ಇವರೆಲ್ಲರು ಮೆಕೆಂಜೆಯವರಿಗೆ ಸಹಾಯಮಾಡಿದವರು. ಸುಮಾರು 38 ವರ್ಷಗಳ ದೀರ್ಘ ಅವಧಿಯವರೆಗೆ ಕೃಷ್ಣೆಯಿಂದ ಕನ್ಯಾಕುಮಾರಿಯವರೆಗೆ ವ್ಯಾಪಕವಾದ ಕ್ಷೇತ್ರದಲ್ಲಿ ಈ ಕಾರ್ಯವನ್ನು ಕೈಗೊಂಡು 13 ಭಾಷೆಗಳ 1568 ಹಸ್ತಪ್ರತಿಗಳ ದೊಡ್ಡ ಸಂಗ್ರಹವೇ ಈತನಿಂದಾಯಿತು. ಇವುಗಳಲ್ಲಿ ಕನ್ನಡದ ಹಸ್ತಪ್ರತಿಗಳು ಕೆಲವೇ ಇದ್ದರೂ ಕೂಡಾ ಕನ್ನಡ ಹಸ್ತಪ್ರತಿ ಸಂಗ್ರಹಕ್ಕೆ ಇದುವೆ ಮೂಲಧನವಾಯಿತು. ಕ್ರಿ.ಶ 1858ರಲ್ಲಿ ಸ್ಥಾಪಿತವಾದ ಸರ್ಕಾರಿ ಹಸ್ತಪ್ರತಿ ಭಂಡಾರಕ್ಕೆ ಸೇರ್ಪಡೆಯಾದ ಈ ಮೆಕೆಂಜಿ ಸಂಗ್ರಹವೇ ಪ್ರಪ್ರಥಮ ಸಾರ್ವಜನಿಕ ಹಸ್ತಪ್ರತಿ ಭಂಡಾರವಾಯಿತು ಎಂದು ಎಚ್.ದೇವೀರಪ್ಪನವರು ಹೇಳುತ್ತಾರೆ."[16]

ಮೈಸೂರಿನಲ್ಲಿ 1891ರಲ್ಲಿ ಸ್ಥಾಪಿತವಾದ ಗೌರ್ವನ್‌ಮೆಂಟ್ ಓರಿಯಂಟಲ್ ಲೈಬ್ರರಿಯೇ ಕರ್ನಾಟಕದಲ್ಲಿ ಕನ್ನಡದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಸರ್ಕಾರದ ಮೊದಲ ಸಂಸ್ಥೆಯಾಯಿತು. ಇದನ್ನು ಬಿಟ್ಟರೆ ಮತ್ತೊಂದು ಸಂಸ್ಥೆಯೆಂದರೆ 1939ರಲ್ಲಿ ಸ್ಥಾಪಿತವಾದ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ. ಆಮೇಲೆ ಸರ್ಕಾರದ ಪರವಾಗಿ ಹಸ್ತಪ್ರತಿ ಸಂಗ್ರಹಣ ಮಾಡಿದ ಸಂಸ್ಥೆಗಳೆಂದರೆ ರಾಜ್ಯದ ಪ್ರಾಚ್ಯವಸ್ತು ಸಂಗ್ರಹಾಲಯವೇ ಆಗಿದೆ.

ಅನಂತರ ಸರ್ಕಾರಿ ಸಂಗ್ರಹಗಳು ಸಾರ್ವಜನಿಕ ಸಂಗ್ರಹಗಳಾಗಿ ಪರಿವರ್ತನೆಗೊಂಡವು ಮೈಸೂರಿನಲ್ಲಿರುವ ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯು ಮೈಸೂರು ವಿಶ್ವವಿದ್ಯಾಲಯದ ಭಾಗವಾಗಿ ಆನಂತರ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಬೆಳೆದು ಬಂದಿತು. 1962ರಲ್ಲಿ ಸಮಗ್ರ ವಚನವಾಙ್ಮಯ ಸಂಗ್ರಹ, ಸಂಸ್ಕರಣ ಮತ್ತು ಪ್ರಕಟನ ಯೋಜನೆಯ ಅಂಗವಾಗಿ ಹಸ್ತಪ್ರತಿಗಳನ್ನು ಸಂಗ್ರಹಿಸಿ ತೊಡಗಿದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಾರ್ವಜನಿಕ ಸಂಸ್ಥೆಗಳಾದ ಕನ್ನಡ ಸಾಹಿತ್ಯ ಪರಿಷತ್ತು, ಬಸವ ಸಮಿತಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವೀರಶೈವ ಮಠಗಳು, ಜೈನಮಠಗಳು ಇನ್ನೂ ಹಲವಾರು ಸಂಸ್ಥೆಗಳು ಹಸ್ತಪ್ರತಿಗಳ ಸಂಗ್ರಹ ಕಾರ್ಯವನ್ನು ಕೈಗೊಂಡಿವೆ.

ಕರ್ನಾಟಕದಲ್ಲಿ ದಕ್ಷಿಣ ಭಾಗದಲ್ಲಿ ಸರಕಾರಿ ಹಾಗೂ ಸಾರ್ವಜನಿಕ ಸಂಸ್ಥೆಗಳ ಪರವಾಗಿ ನಡೆದಷ್ಟು ಹಸ್ತಪ್ರತಿ ಸಂಗ್ರಹಣ ಕಾರ್ಯವು ಉತ್ತರ ಕರ್ನಾಟಕದಲ್ಲಿ ಆಗಲಿಲ್ಲ ಈ ಭಾಗದಲ್ಲಿ ಕೆಲವು ಮಹನೀಯರುಗಳು ವ್ಯಯಕ್ತಿಕವಾಗಿ ಸಂಗ್ರಹ ಕಾರ್ಯ ಕೈಗೊಂಡುದುದು ಗಮನಾರ್ಹ ಸಂಗತಿಯಾಗಿದೆ. ಇವರಲ್ಲಿ ಹಳಕಟ್ಟಿಯವರ ಹೆಸರು ಅಗ್ರಮಾನ್ಯವಾದುದು. ಡಾ.ಶಿ.ಚೆ.ನಂದಿಮಠ. ಪ್ರೊ.ಜಿ.ಎಂ.ಉಮಾಪತಿ ಶಾಸ್ತ್ರಿಗಳು ಲಿಂಗಸೂಗೂರಿನ ಗೋರೆಬಾಳ ಹನುಮಂತರಾಯರು ಇವರೆಲ್ಲರ ಸಂಗ್ರಹಕಾರ್ಯಗಳು ಪ್ರಮುಖವಾದವುಗಳೆನಿಸಿವೆ. ವ್ಯಯಕ್ತಿಕವಾಗಿ ಹಸ್ತಪ್ರತಿ ಸಂಗ್ರಹಣಕಾರ್ಯ ಮಾಡಿದ ಈ ಕೆಲವು ಮಹನೀಯರು ಒಂದು ಸಂಸ್ಥೆ ಮಾಡುವಷ್ಟು ಕಾರ್ಯಮಾಡಿ ಈ ಕ್ಷೇತ್ರದಲ್ಲಿ ದುಡಿದಿದ್ದಾರೆ.

"ನಾಡಿನ ಈ ಸಂಸ್ಥೆಗಳಂತೆ, ಹೊರನಾಡಿನ ಸಂಸ್ಥೆಗಳಾದ ಕೊಲ್ಲಾಪುರದ ಶ್ರೀಲಕ್ಷ್ಮೀ ಸೇನ ಭಟ್ಟಾರಕ ಮಠ, ಮಹಾರಾಷ್ಟ್ರದ ಬಾಹುಬಲಿ ಆಶ್ರಮ, ಬಿಹಾರದಲ್ಲಿನ ಆರಾದಲ್ಲಿನ ಜೈನ ಸಿದ್ಧಾಂತಭವನ. ಮದ್ರಾಸ್ ವಿಶ್ವವಿದ್ಯಾಲಯದ ಪ್ರಾಚೀನ ಹಸ್ತಪ್ರತಿ ಭಂಡಾರ, ಹೈದಾರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯ ಮೊದಲಾದವುಗಳು ಕನ್ನಡ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದುದು ಸ್ಮರಣೀಯವಾಗಿದೆ."[17]

---

## ಅಡಿಟಿಪ್ಪಣಿಗಳು

1) ಹಸ್ತಪ್ರತಿಗಳಲ್ಲಿ ಆಯಾ ಕಾಲದ ಭಾಷಾ ವೈಲಕ್ಷಣಗಳು ಕಂಡುಬರುತ್ತದೆ "ನೋಱ್ಪೆನ್, ಬೇಱ್ಪೆನ್, ನೋಡುವೆನ್, ಬೇಡುವೆನ್, ಬರಿಸುವೆನ್, ಇರಿಸುವೆನ್ ಇಂತಹ ಪದರೂಪಗಳು ಚಂಪೂ ಸಾಹಿತ್ಯದ ಹಸ್ತಪ್ರತಿಗಳಲ್ಲಿ ಕಂಡುಬರುತ್ತದೆ. ಹಳಗನ್ನಡ ಯ್.ರ್.ಲ್.ನ್.ಳ್.ಱ್. ಇಂತಹ ವ್ಯಂಜನಾಂತ ಪದಗಳು ನಡುಗನ್ನಡದಲ್ಲಿ ಸ್ವರಗಳಾಗಿವೆ. ಉದಾ:- ಹಾಯ್>ಹಾಯು, ನಾರ್>ನಾರು ಪಾಲ್>ಪಾಲು, ಕಣ್>ಕಣ್ಣು ಮಿನ್>ಮೀನು, ಕರುಳ್>ಕರುಳು, ಪೆಸ್ತಱ್>ಪೆಸಯ ಮುಂತಾದವು ಕನ್ನಡ ಹಸ್ತಪ್ರತಿರಚನೆ ಭಾಷಿಕ ವಿವೇಚನೆ, 2006, ಡಾ.ಎಸ್.ಎಸ್.ಅಂಗಡಿ ಕ.ವಿ.ಹಂಪಿ 'ಭಾಷೆ ಮತ್ತು ಲಿಪಿ'. ಪುಟ-207"

2) ಗ್ರಂಥ ಸಂಪಾದನ ಪರಿಭಾಷಾಕೋಶ - ಟಿ.ವಿ.ವೆಂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ 2004 ಪುಟ-61.

3) ಬಿ.ಕೆ.ಹಿರೇಮಠ: ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ (ಪು.7-8)

4) ಆಕ್ಸ್‌ಫರ್ಡ್ ನಿಘಂಟಿನ ಇನ್ನೊಂದು ಮುದ್ರಣದ ಪ್ರತಿಯಲ್ಲಿ ಹೀಗಿದೆ:

MANUSCRIPT :

1. Thing written by hand, not typed or printed.

2. Authors work when written or typed (that is not yet a printed book.)

p-759, Oxford advanced learner's dictionary, 1994 pub: Oxford university press, calcutta.

5). ಮ್ಯಾನ್ಯುಸ್ಕ್ರಿಪ್ಟ್ ಎಂಬುದಕ್ಕೆ ಮೈಸೂರು ವಿಶ್ವವಿದ್ಯಾಲಯದ ಇಂಗ್ಲಿಷ್-ಕನ್ನಡ ನಿಘಂಟು (ಪರಿಷ್ಕೃತ) 1999, ಪುಟ-3222 ರಲ್ಲಿ ಹೀಗೆ ಹೇಳಿದೆ:

**ಮ್ಯಾನ್ಯುಸ್ಕ್ರಿಪ್ಟ್:** (ನಾ) 1. ಕೈಬರಹ: ಕೈಬರಹದ ಹಸ್ತಲಿಖಿತ-ಪುಸ್ತಕ, ದಸ್ತಾವೇಜು ಮೊದಲಾದವು.

2. **ಹಸ್ತಪ್ರತಿ:** ಎ) ಮುದ್ರಣಕ್ಕಾಗಿ ಲೇಖಕನು ಬರೆದ) ಕೈಬರಹದ ಯಾ ಬೆರಳಚ್ಚು ಮಾಡಿದ ಪ್ರತಿ. ಬಿ) ಕೈಬರಹದ ರೂಪ; – ಕೈಬರಹದ ರೂಪದಲ್ಲಿ ತಂದಿರುವ.


6) ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ ಸಂಪುಟ–12, ಪುಟ–277, (ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನದಿಂದ ಉದ್ಧೃತ).

7) ಭಾರತೀಯ ಗ್ರಂಥ ಸಂಪಾದನ ಶಾಸ್ತ್ರ, ಪುಟ–16 (ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನದಿಂದ ಉದ್ಧೃತ).

8) ಲೇಖನ: ಪುಟ–1, ಹಸ್ತಪ್ರತಿ ಶಾಸ್ತ್ರ: ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನ. ಲೇಖನ: ಕನ್ನಡ ಸಂಶೋಧನೆಯಲ್ಲಿ ಮುಂದಿನ ಹೆಜ್ಜೆ –ರಂ ಶ್ರೀ ಮುಗುಳಿ.

9) ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು, 2006, ಎ.ಆರ್.ಗುರು, ಬಿ.ಎಂ.ಶ್ರೀ. ಸ್ಮಾರಕಪ್ರತಿಷ್ಠಾನ ಬೆಂಗಳೂರು.

ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು, 2002, ಎ.ಆರ್.ಗುರು, ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನ ಬೆಂಗಳೂರು.

10) ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ–ಸಂಪುಟ–(1), 1987, ಪ್ರ: ಬಿ.ಎಂ.ಶ್ರೀ. ಸ್ಮಾರಕಪ್ರತಿಷ್ಠಾನ, ಬೆಂಗಳೂರು.

11) ಕನ್ನಡ ವಿಶ್ವವಿದ್ಯಾಲಯ. ಹಸ್ತಪ್ರತಿ ಸೂಚಿ 4 ಸಂಪುಟಗಳು, ಪ್ರ:ಕನ್ನಡ ವಿಶ್ವವಿದ್ಯಾಲಯ, ಹಂಪಿ.

12) ಕನ್ನಡ ಹಸ್ತಪ್ರತಿ ಸೂಚಿಗಳು, ಪುಟ–89, ಕನ್ನಡ ಹಸ್ತಪ್ರತಿ ಶಾಸ್ತ್ರ: ಎಂ.ಎಂ.ಕಲುಬುರ್ಗಿ, 1993, ಸ್ನೇಹ ಪ್ರಕಾಶನ: ಬೆಂಗಳೂರು.

13) ಪರಿವಿಡಿ, 'ಕನ್ನಡ ಹಸ್ತಪ್ರತಿಶಾಸ್ತ್ರ' ಎಂ.ಎಂ. ಕಲುಬುರ್ಗಿ, 1993.

14) ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ, ಸಂಪುಟ–3, ಪುಟ–13.

15) ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ಬಿ.ಕೆ.ಹಿರೇಮಠ, ಪುಟ–248.

16) ಹಸ್ತಪ್ರತಿ ಶಾಸ್ತ್ರ ಪರಿಚಯ; ಬಿ.ಎಸ್.ಸಣ್ಣಯ್ಯ, ಪುಟ–34.

17) ಕನ್ನಡ ಹಸ್ತಪ್ರತಿ ಶಾಸ್ತ್ರ; ಎಂ.ಎಂ.ಕಲುಬುರ್ಗಿ, ಪುಟ–122.

# ಅಧ್ಯಾಯ –3

# ಪ್ರಕಟಿತ ಸೂಚಿಗಳು ಮತ್ತು ಕನ್ನಡ ಹಸ್ತಪ್ರತಿ ಸೂಚೀಕರಣ

## ಪ್ರಕಟಿತ ಸೂಚಿಗಳು:

ಕನ್ನಡವಲ್ಲಿ ಸೂಚೀಸಾಹಿತ್ಯ ಎಂಬುದು ಹೊಸದೊಂದು ಪ್ರಕಾರವಾಗಿದೆ. ಹಸ್ತಪ್ರತಿ ಶಾಸ್ತ್ರದ ಅಂಗವಾಗಿ ಬರುವ ಆ ವಿಚಾರವಾದರೂ, ಈ ಮೊದಲು ಹಸ್ತಪ್ರತಿಶಾಸ್ತ್ರವು ಪ್ರಾರಂಭಕ್ಕೆ ಗ್ರಂಥ ಸಂಪಾದನ ಶಾಸ್ತ್ರದ ಒಂದು ಅಂಗವಾಗಿದ್ದು ಈಗ ಅದೇ ಪ್ರತ್ಯೇಕ ಶಾಸ್ತ್ರವೆಂದು ಪರಿಗಣಿಸುವವರಿದ್ದಾರೆ. ಮತ್ತೆ ಕೆಲವರು ಗ್ರಂಥ ಸಂಪಾದನ ಶಾಸ್ತ್ರದ ಒಂದು ಭಾಗವೆಂದೇ ಬಗೆಯುತ್ತಾರೆ. ಅದೇನೇ ಇರಲಿ. ಸೂಚೀರಚನೆ ಮತ್ತು ಸೂಚಿ ಪ್ರಕಟನೆಗಳು 20ನೇ ಶತಮಾನದಲ್ಲಿ ಕನ್ನಡದಲ್ಲಿ ಪಾಶ್ಚಾತ್ಯ ವಿದ್ವಾಂಸರ ಪ್ರಭಾವದಿಂದ ಮೂಡಿ ಬಂದ ಪ್ರಕಾರ ಎನ್ನುವುದರಲ್ಲಿ ತಪ್ಪಿಲ್ಲ. ಹಾಗೆಂದ ಮಾತ್ರಕ್ಕೆ ಸೂಚಿ ರಚಿಸಿರುವ ಕಾರ್ಯ ನಮ್ಮಲ್ಲಿ ಇರಲಿಲ್ಲ ಎಂಬರ್ಥವಲ್ಲ, ಈಗಿನ ರಚನಾ ರೀತಿಯಲ್ಲಿ ಸೂಚೀಕರಣವಿರಲಿಲ್ಲ ಎಂದಷ್ಟೇ ಅರ್ಥ. ಬೆಂಗಳೂರು ವಿಶ್ವವಿದ್ಯಾಲಯದ 128:11 ಸಂಖ್ಯೆಯ ಕಟ್ಟಿನಲ್ಲಿ ಈ ಬಗ್ಗೆ ಶ್ರೀ ಶುಭಮಸ್ತು । ಮುಳುವಳ್ಳಿ ಮಠದಲ್ಲಿಹ ಪುಸ್ತಕದ ವಿವರ॥ ಎಂದು ಹೇಳಿ ಅಲ್ಲಿಯ ಪುಸ್ತಕಗಳ ಯಾದಿಯನ್ನು ಕೊಡಲಾಗಿದೆ. ಜೈಮಿನಿ ಭಾರತದ ತಾಳೆ ಪ್ರತಿ (ಮಹಸೂ v-956) ರಲ್ಲಿ 600 ಗ್ರಂಥಗಳ ಹೆಸರಿರುವ ಸೂಚೀ ಪತ್ರವಿರುವ ವಿಷಯ ತಿಳಿದುಬರುತ್ತದೆ.[1]

ಕನ್ನಡದಲ್ಲಿ ಪ್ರಕಟವಾದ ಮೊದಲ ವರ್ಣನಾತ್ಮಕ ಸೂಚಿ ಎಂದರೆ 1974 ರಲ್ಲಿ ಮದ್ರಾಸ್ ಸರ್ಕಾರದಿಂದ ಪ್ರಕಟವಾದ ಮೆಕೆಂಜಿ ಸಂಗ್ರಹಕ್ಕೆ (1828) ಸಂಬಂಧಿಸಿದ "ಮೆಕೆಂಜಿ ಕಲೆಕ್ಸನ್ಸ್. ಎ.ಡಿಸ್ಕ್ರಿಪ್ಟಿವ್‌ಕ್ಯಾಟಲಾಗ್ ಆಫ್ ದಿ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್.ಎಚ್.ಎಸ್.ವಿಲ್ಸನ್ ವಾಲ್ಯೂಂ I 1828" ಎಂಬ ವರ್ಣನಾತ್ಮಕ ಹಸ್ತಪ್ರತಿ ಸೂಚಿ ಆಗಿದೆ. ಒಟ್ಟು 152 ಕನ್ನಡ ಕೃತಿಗಳ ವಿವರ ಈ ಸೂಚಿಯಲ್ಲಿದೆ"[2]

ಪ್ರಕಟಿತ ಹಸ್ತಪ್ರತಿಗಳನ್ನು ಎರಡು ಬಗೆಯಾಗಿ ವರ್ಗೀಕರಿಸಬಹುದು. ಮುದ್ರಿತ ಪ್ರತಿಗಳ ಸೂಚಿ, ಹಸ್ತಪ್ರತಿ ಗ್ರಂಥಗಳ ಸೂಚಿ ಎಂಬುದಾಗಿ ವರ್ಗೀಕರಿಸಬಹುದು. ಮುದ್ರಿತ ಪ್ರತಿಗಳ ಸೂಚಿ ರಚನಾ ಪದ್ಧತಿ ಮತ್ತು ಹಸ್ತಪ್ರತಿ ಗ್ರಂಥಸೂಚಿ ರಚನಾ

ಪದ್ಧತಿ ಬಳಕೆಗೆ ಬಂದಿವೆ. 20ನೇ ಶತಮಾನದಲ್ಲಿ ಕನ್ನಡದಲ್ಲಿ ಎರಡೂ ಬಗೆಯ ಸೂಚಿಗಳು ಪ್ರಕಟವಾಗಿದ್ದರೂ ಮುದ್ರಿತ ಪ್ರತಿಗಳ ಸೂಚಿಗಳ ಸಂಖ್ಯೆಯೇ ಹೆಚ್ಚು ಎನ್ನಬಹುದು. ಹಸ್ತಪ್ರತಿ ಗ್ರಂಥಸೂಚಿಯಲ್ಲಿ 4 ಬಗೆಗಳನ್ನು ಸಮಗ್ರ ಸೂಚಿ, ವರ್ಣನಾತ್ಮಕ ಸೂಚಿ, ಸಮಗ್ರ ಸೂಚಿ, ವಿಶಿಷ್ಟ ಸೂಚಿಗಳನ್ನು ಕಾಣುತ್ತೇವೆ. ಆದರೆ, ಮುದ್ರಿತ ಪ್ರತಿಗಳ ಸೂಚಿಯಲ್ಲಿ ನಾನಾ ಬಗೆಯ ಸೂಚಿಗಳನ್ನು ಕಾಣುತ್ತೇವೆ. ಮುದ್ರಿತ ಪ್ರತಿಸೂಚಿಯಲ್ಲಿ ಒಂದು ಗ್ರಂಥ ಭಂಡಾರದಲ್ಲಿ ಒಬ್ಬ ವ್ಯಕ್ತಿಯಲ್ಲಿ ಒಂದು ಸ್ಥಳದಲ್ಲಿ ಇರುವ ಗ್ರಂಥಗಳ ಸೂಚಿಗಳು ರಚನೆ ಆಗಿರುವುದನ್ನು ಕಾಣುತ್ತೇವೆ. ಹಸ್ತಪ್ರತಿ ಸೂಚಿಗಳಲ್ಲೂ ಒಂದು ಗ್ರಂಥಭಂಡಾರದಲ್ಲಿ ಒಂದು ಸ್ಥಳದಲ್ಲಿ (ಮಠದಲ್ಲಿ) ಒಬ್ಬ ವ್ಯಕ್ತಿಯಲ್ಲಿ ಇರುವ ಸೂಚಿಗಳನ್ನು ಕಾಣುತ್ತೇವೆ. ಆದರೂ ಸಮಗ್ರ ಸೂಚಿಗಳು ಮತ್ತು ವಿಶಿಷ್ಟ ಸೂಚಿಗಳು ಮುದ್ರಿತ ಪ್ರತಿಗಳಲ್ಲಿ ಇರುವಂತೆ ಕಾಣುವುದಿಲ್ಲ ಈಚೆಗೆ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ 13 ಕನ್ನಡ ಸೂಚಿಗಳು ಒಂದು ಅಪವಾದವೆನ್ನಬಹುದು. ಪ್ರಸ್ತುತ ಪ್ರಬಂಧದಲ್ಲಿ ಹಸ್ತಪ್ರತಿ ಗ್ರಂಥಸೂಚಿ ಮುಖ್ಯವಾಗಿರುವುದರಿಂದ ಮುದ್ರಿತ ಪ್ರತಿಗಳ ಸೂಚಿ ಬಗ್ಗೆ ಸಂಕ್ಷಿಪ್ತವಾಗಿ ಪ್ರಸ್ತಾಪಿಸಲಾಗಿದೆ.

## ಮುದ್ರಿತ ಪ್ರತಿಸೂಚಿಗಳು:

ಹಸ್ತಪ್ರತಿಸೂಚಿ, ಮುದ್ರಿತ ಪ್ರತಿಸೂಚಿ ಎರಡೂ ಮುದ್ರಣವಾಗಿರುವುದನ್ನು ಕಾಣುತ್ತೇವೆ. ಈಚೆಗೆ ಮುದ್ರಣ ಪ್ರತಿಗಳ ಮೂಲಪ್ರತಿ ಬೆರಳಚ್ಚಿನ ಪ್ರತಿಯೊಂದರ ಇಲ್ಲವೆ ಕಂಪ್ಯೂಟರ್‌ನಲ್ಲಿ ಟೈಪಾದ ಪ್ರತಿ ಆಗುತ್ತಿದೆ. ಆದರೆ ಹಸ್ತಪ್ರತಿ ಗ್ರಂಥ ಸೂಚಿಗಳು ಕೈಬರಹದಲ್ಲೇ ಸಿದ್ಧವಾಗಿ ಅಚ್ಚಾಗುತ್ತಿದೆ. ಒಟ್ಟಿನಲ್ಲಿ ಪ್ರಕಟಿತ ಸೂಚಿಗಳು ಕನ್ನಡದಲ್ಲಿ ಆಧುನಿಕ ಪ್ರಕಾರಗಳ ಪೈಕಿ ಮಹತ್ವದ್ದಾಗಿದೆ ಎನ್ನಬಹುದು. ಮುದ್ರಿತ ಪ್ರತಿಗಳ ಪ್ರಕಟಿತ ಗ್ರಂಥಸೂಚಿಗಳನ್ನು ಎರಡು ಬಗೆಯಾಗಿ ವರ್ಗೀಕರಿಸಬಹುದು  ಮುದ್ರಿತ ಪ್ರತಿಗಳ ಗ್ರಂಥ ಸೂಚಿ, ಹಸ್ತಪ್ರತಿಗಳ ಗ್ರಂಥಸೂಚಿ, ಅಚ್ಚಾದ ಗ್ರಂಥ ಸೂಚಿಗಳಿಗೆ ಇಂಗ್ಲಿಷ್‌ನಲ್ಲಿ 'ಬಿಬ್ಲಿಯೋಗ್ರಫಿ' ಕ್ಯಾಟಲಾಗ್ ಇಂಡೆಕ್ಸ್' ಎಂದು ಕರೆಯುತ್ತಾರೆ ಇದಕ್ಕೆ ಕನ್ನಡದಲ್ಲಿ ಕ್ರಮವಾಗಿ ಗ್ರಂಥಸೂಚಿ, ಸೂಚಿ, ನಿರ್ದೇಶಿ ಎಂಬ ಪಾಠಗಳನ್ನು ಡಾ.ರಂಗನಾಥನ್ ಸೂಚಿಸಿದ್ದಾರೆ"[3]. ಆದರೆ ಗ್ರಂಥ ಸೂಚಿ ಪದವೇ ಹೆಚ್ಚು ಬಳಕೆಯಲ್ಲಿದೆ.

ಗ್ರಂಥಸೂಚಿ ಎಂದರೆ, "ಯಾವುದಾದರೊಂದು ನಿರ್ದಿಷ್ಟ ವಿಷಯದ ಬಗ್ಗೆ ಇರುವ ಎಲ್ಲಾ ಬರೆದ ಪ್ರಕಾರಗಳ ವ್ಯವಸ್ಥಿತ ಪಟ್ಟಿ ಎಂದರೆ ಯಾವುದೇ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸುವಂತೆ ಇರುವ ಪುಸ್ತಕಗಳು, ನಿಯತಕಾಲಿಕೆಗಳು, ಲೇಖನಗಳು, ಸಮ್ಮೇಳನಗಳ ವರದಿಗಳು, ಸಂಸ್ಥೆಗಳ ವರದಿಗಳು, ಸರಕಾರದ ದಾಖಲೆಗಳು, ಪ್ರಕಟನಾ

ಪಟ್ಟಿಗಳು, ಕರಪತ್ರಗಳು, ಗ್ರಾಮಪೋನ್, ರಿಕಾರ್ಡುಗಳು, ಟೇಪರಿಕಾರ್ಡುಗಳು, ಯಂತ್ರಗಳು, ಇತರೆ ಶ್ರವಣ-ದೃಶ್ಯ ದಾಖಲೆಗಳು ಈ ಎಲ್ಲಾ ರೀತಿಯ ಸಾಮಗ್ರಿಗಳನ್ನು ಒಂದಕ್ಕೊಂದು ಸಂಬಂಧವಿರುವಂತೆ ವರ್ಗೀಕರಿಸಿ ಪೂರ್ಣ ಮಾಹಿತಿ ಕೊಡುವ ಪಟ್ಟಿಯೇ ಗ್ರಂಥಸೂಚಿ[4]. ಪುಸ್ತಕಪಟ್ಟಿ ಎಂದರೆ ಗ್ರಂಥಾಲಯದಲ್ಲಿರುವ ಎಲ್ಲಾ ಪುಸ್ತಕಗಳ ಮತ್ತಿತರ ದಾಖಲೆಗಳ ಮಾಹಿತಿಯನ್ನು ಕೊಡುವ ಪಟ್ಟಿ. "ಪುಸ್ತಕಪಟ್ಟಿಗೂ (ಕ್ಯಾಟಲಾಗ್) ಗ್ರಂಥಸೂಚಿಗೂ (ಬಿಬ್ಲಿಯೋಗ್ರಫಿ) ಇರುವ ವ್ಯತ್ಯಾಸ ಹೀಗೆ: ಪುಸ್ತಕಪಟ್ಟಿಯ ಗ್ರಂಥಾಲಯದಲ್ಲಿ ದೊರಕುವ ಪುಸ್ತಕ ಮತ್ತಿತ್ತರ ಬರೆದ ಸಾಧನಗಳಿಗೆ ಸೀಮಿತವಾಗಿರುತ್ತದೆ. ಇದೊಂದು ಗ್ರಂಥಾಲಯದ ಅತ್ಯವಶ್ಯ ಸಾಧನ" ಗ್ರಂಥ ಸೂಚಿ ಯಾವುದೇ ಒಂದು ನಿರ್ದಿಷ್ಟ ವಿಷಯದಲ್ಲಿಯ ಎಲ್ಲಾ ಬರೆದ ಪ್ರಕಾರಗಳನ್ನು ಸೂಚಿಸುತ್ತದೆ. ಇದು ಒಂದು ಗ್ರಂಥಾಲಯದಲ್ಲಿ ಅಥವಾ ಒಂದು ದೇಶದಲ್ಲಿ ದೊರಕುವ ಬರೆದ ಪ್ರಕಾರಗಳಿಗೆ ಸೀಮಿತವಾಗಿಲ್ಲ ಇದು ವಿಶ್ವವ್ಯಾಪಿ. ತಾತ್ವಿಕವಾಗಿ ಇದಕ್ಕೆ ಕಾಲ ಭಾಷೆಯ ನಿರ್ಬಂಧವೂ ಇಲ್ಲ. ನಿರ್ದೇಶಿ ಎಂದರೆ ಪುಸ್ತಕದ ಕೊನೆಯಲ್ಲಿ ನಾನಾ ವಿಷಯ ವಿಭಾಗಗಳನ್ನು ಅಕಾರಾದಿಯಾಗಿ ಜೋಡಿಸಿ ಅವುಗಳ ಬಗ್ಗೆ ಪುಸ್ತಕದಲ್ಲಿ ಯಾವ ಪುಟಗಳಲ್ಲಿ ವಿವರಗಳೂ ದೊರೆಯುತ್ತಿದೆಂಬುದನ್ನು ತೋರಿಸುವ ಅಕಾರಾದಿ ಪಟ್ಟಿ ಹೀಗೆ ಪುಸ್ತಕಪಟ್ಟಿ, ಗ್ರಂಥಸೂಚಿ ನಿರ್ದೇಶಿ ಎಂದು 3 ತೆರವಾಗಿ ಅಚ್ಚಾದ ಪುಸ್ತಕ ಸೂಚಿಗಳನ್ನು ವರ್ಗೀಕರಿಸಬಹುದು. ಗ್ರಂಥಸೂಚಿಯಲ್ಲಿ ಹಲವು ವಿಧಗಳಿವೆ[5].

1 ವಿವರಣಾತ್ಮಕ ಗ್ರಂಥಸೂಚಿ (ಡಿಸ್ಕ್ರಿಪ್ಟೀವ್ ಬಿಬ್ಲಿಯೋಗ್ರಫಿ)
2. ವಿಶ್ಲೇಷಣಾತ್ಮಕ ಗ್ರಂಥಸೂಚಿ (ಅನೆಲಿಟಕಲ್ ಬಿಬ್ಲಿಯೋಗ್ರಫಿ)
3. ಪಾಠನಿರ್ಣಯ ಗ್ರಂಥಸೂಚಿ (ಟೆಕ್ಸ್ಟುಯಲ್ ಬಿಬ್ಲಿಯೋಗ್ರಫಿ)
4. ಚಾರಿತ್ರಿಕ ಗ್ರಂಥಸೂಚಿ (ಹಿಸ್ಟಾರಿಕಲ್ ಬಿಬ್ಲಿಯೋಗ್ರಫಿ)
5. ವ್ಯವಸ್ಥಾತ್ಮಕ ಗ್ರಂಥಸೂಚಿ (ಸಿಸ್ಟಮ್ಯಾಟಿಕ್ ಬಿಬ್ಲಿಯೋಗ್ರಫಿ)
6. ರಾಷ್ಟ್ರೀಯ ಗ್ರಂಥಸೂಚಿ (ನ್ಯಾಷನಲ್ ಬಿಬ್ಲಿಯೋಗ್ರಫಿ)
7. ಭೌಗೋಳಿಕ ಗ್ರಂಥಸೂಚಿ ( ಪರ್ಸನಲ್ ಬ್ಲಿಯೋಗ್ರಫಿ)
8. ಸಂಚಿತ ಗ್ರಂಥಸೂಚಿ (ಕ್ಯುಮುಲೇಟ್ ಜಿಯೊಗ್ರಫಿಕಲ್‌ಬುಕ್ ಇಂಡೆಕ್ಸ್)

ಮೇಲ್ಕಂಡ ಮುದ್ರಿತ ಪ್ರತಿಗಳ, ಗ್ರಂಥ ಸೂಚಿಗಳ ಜತೆಗೆ ಇನ್ನೊಂದು ಬಗೆ ಗ್ರಂಥ ಸೂಚಿ ಇದೆ. ಅದೇ ನಿರ್ದಿಷ್ಟ ವಿಷಯ ಗ್ರಂಥಸೂಚಿ ಈ ಸೂಚಿ ಹಲವು ಬಗೆಯಾಗಿವೆ. ಈ ಪ್ರಕಾರಗಳಲ್ಲಿ ಹಸ್ತಪ್ರತಿ ಗ್ರಂಥಸೂಚಿಯನ್ನು ಸೇರಿಸಬಹುದು. ನಿರ್ದಿಷ್ಟ ವಿಷಯ ಗ್ರಂಥಸೂಚಿಯ ಒಳಬಗೆಗಳನ್ನು, ಗ್ರಂಥಸೂಚಿಯ ರಚನೆ ಗ್ರಂಥದಲ್ಲಿ ಟಿ.ವಿ.ಸುಬ್ರಹ್ಮಣ್ಯಂ ಅವರು ಹೀಗೆ ಸೂಚಿಸಿದ್ದಾರೆ:[6]

1."ಸಾಹಿತ್ಯದ ಪ್ರಕಾರಗಳನ್ನು ಕುರಿತು: ಕನ್ನಡ ಪದ್ಯ, ನಾಟಕ, ಕಾದಂಬರಿ ಇತ್ಯಾದಿ.

2. ನಿರ್ದಿಷ್ಟ ಕಾಲದಲ್ಲಿ ಪ್ರಕಟವಾದ ಪುಸ್ತಕಗಳನ್ನು ಕುರಿತು: ಪ್ರಾಚೀನ ಗ್ರಂಥಗಳು, 19ನೇ ಶತಮಾನದ ಕನ್ನಡ ಗ್ರಂಥಗಳು.

3. ವಿಶೇಷರೀತಿಯ ಪುಸ್ತಕಗಳನ್ನು ಕುರಿತು: ಹೆಚ್ಚು ಪ್ರತಿ ಖರ್ಚಾದ ಪುಸ್ತಕಗಳು, ಭಾಷಾಂತರಗಳು, ಹೆಂಗಸರಿಂದ ಬರೆಯಲ್ಪಟ್ಟ ಪುಸ್ತಕಗಳು, ಕ್ರೈಸ್ತ ಪಾದರಿಗಳಿಂದ ಬರೆದ ಪುಸ್ತಕಗಳು ಇತ್ಯಾದಿ.

4. ಒಬ್ಬ ಗ್ರಂಥಕಾರನಿಗೇ ಮೀಸಲಾಗಿಟ್ಟ ಗ್ರಂಥಸೂಚಿ: ಗೋವಿಂದ ಪೈ ವಾಙ್ಮಯ ದರ್ಶನ.

5. ಒಂದೇ ಪುಸ್ತಕದ ವಿವಿಧ ಆವೃತ್ತಿಗಳು: ಕುಮಾರವ್ಯಾಸ, ಭಗವದ್ಗೀತೆ, ಬಸವಣ್ಣನವರ ವಚನಗಳು.

6. ಒಂದೇ ಕಾವ್ಯದ ಭಾಷಾಂತರಗಳು: ಶಾಕುಂತಲ, ಮೃಚ್ಛಕಟಿಕ ಇವುಗಳ ಭಾಷಾಂತರಗಳು.

7. ಒಂದೇ ಅಚ್ಚುಕೂಟಕ್ಕೆ ಮೀಸಲಾದವು: ಕಲಾನಿಧಿ ಪ್ರೆಸ್, ಬೆಂಗಳೂರು; ವೆಸ್ಲಿಯನ್‌ಪ್ರೆಸ್, ಕಾವ್ಯಾಲಯ ಪ್ರಕಾಶನ, ಬಾಸೆಲ್ ಮಿಷನ್ ಪ್ರಕಟಣೆಗಳು.

8. ಒಂದೇ ವಿಷಯವನ್ನು ಕುರಿತು: ಭೂಶಾಸ್ತ್ರ ವಾಸ್ತು ಶಿಲ್ಪ, ಆಯುರ್ವೇದ ಇತ್ಯಾದಿ.

ಈಚಿನ ಸೂತ್ರವೆಂದರೆ "ಬರೆದ ಅಥವಾ ಮುದ್ರಿತ ದಾಖಲೆಗಳ ವಿವರಣಾತ್ಮಕ ಪಟ್ಟಿಗಳನ್ನು ವ್ಯವಸ್ಥಿತವಾಗಿ ರಚಿಸುವ ತಂತ್ರ" ಎನ್ನಬಹುದು ಇದರಿಂದ ಪುಸ್ತಕವಲ್ಲದ ಇತರ ಬರೆದ ಸಾಮಗ್ರಿಗಳನ್ನು-ನಿಯತಕಾಲಿಕೆಯಲ್ಲಿನ ಲೇಖನಗಳು ಹಸ್ತಪ್ರತಿಗಳು ಶಾಸನಗಳು, ಗ್ರಾಮಾಪೋನ್, ರಿರ್ಕಾಡುಗಳು, ಟೇಪ್‌ರೆಕಾರ್ಡ್‌ಗಳು ಇತ್ಯಾದಿ. ಎಲ್ಲಾ ರೀತಿಯ ಸಾಮಗ್ರಿಗಳೂ ಸೇರಿವೆ."[7] ಆಧುನಿಕ ವ್ಯಾಖ್ಯಾನಕ್ಕೆ ಅನುಗುಣವಾಗಿ ಗ್ರಂಥಸೂಚಿಯ ಉದ್ದೇಶವೆಂದರೆ "ಸಂಶೋಧಕನಿಗೆ ಆಸಕ್ತಿಯುಳ್ಳ ವಿಷಯದಲ್ಲಿ ಪುಸ್ತಕಗಳು, ಲೇಖನಗಳು

ಹಸ್ತಪ್ರತಿಗಳು ಮೊದಲಾದ ಬರೆದ ಸಾಧನಗಳ ಇರುವಿಕೆಯನ್ನು ಕಂಡುಹಿಡಿದು ಅವುಗಳ ಪ್ರಾಮಾಣಿಕತೆಯನ್ನು ನಿರ್ಣಯಿಸುವಲ್ಲಿ ಸಹಾಯ ಮಾಡುವುದು".

**ಮುದ್ರಿತ ಗ್ರಂಥಸೂಚಿಯ ಪ್ರಯೋಜನಗಳು:**

ಮುದ್ರಿತ ಗ್ರಂಥಸೂಚಿ ಉಪಯೋಗಗಳನ್ನು ಕುರಿತು ಮೈ.ವಿ.ವಿ ಕನ್ನಡ ಗ್ರಂಥಸೂಚಿ-1 ರ ಮುನ್ನುಡಿ ಹೀಗೆ ಹೇಳಿದೆ.

"ಗ್ರಂಥಸೂಚಿ ಸಂಶೋಧಕರಿಗೆ ಅತ್ಯಂತ ಅವಶ್ಯಕವಾದ ಆಕರಗ್ರಂಥ. ಯಾವುದೇ ವಿಷಯದಲ್ಲಿ ಸಂಶೋಧನೆಗೆ ತೊಡಗುವ ಮೊದಲು ಸಂಶೋಧಕ ಮಾಡುವ ಕೆಲಸ ಆವರೆಗೆ ಆ ವಿಷಯವಾಗಿ ಹೊರಬಂದಿರುವ ವಿಷಯಗಳನ್ನು ಸಂಗ್ರಹಿಸುವುದು. ಈ ಕೆಲಸಕ್ಕೆ ಗ್ರಂಥಸೂಚಿಯಿಂದ ದೊರೆಯುವಂಥ ತಕ್ಷಣದ ಸಿದ್ಧನೆರವು ಬೇರೆ ಯಾವುದರಿಂದಲೂ ದೊರಕುವುದಿಲ್ಲ.

ಅಲ್ಲದೆ ಗ್ರಂಥಸೂಚಿ ಕೊಡುವ ಚಿತ್ರ ಅತ್ಯಂತ ವಿಸ್ತಾರವೂ ವರ್ಣಮಯವೂ ಆದುದು. ಬರವಣಿಗೆ ರೂಪುಗೊಂಡಂದಿನಿಂದಲೂ ಮಾನವ ತತ್ವ, ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ತಂತ್ರ, ಮೊದಲಾದ ಅಸಂಖ್ಯ ಕ್ಷೇತ್ರಗಳಲ್ಲಿ ಹೇಗೆ ಚಿಂತನೆ ಮಾಡಿದ್ದಾನೆ. ಆ ಚಿಂತನೆಗೆ ಹೇಗೆ ಅಭಿವ್ಯಕ್ತಿ ನೀಡಿದ್ದಾನೆ. ಅವನ ಅಭಿರುಚಿಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿವೆ, ಶೈಲಿ ಹೇಗೆ ರೂಪಾಂತರಗೊಳ್ಳುತ್ತಾ ಹೋಗಿದೆ, ಅವನ ಸಂಸ್ಕೃತಿಯ ಮೇಲೆ ಇದರ ಪರಿಣಾಮ ಏನಾಗಿದೆ ಎಂಬೆಲ್ಲ ವಿಚಾರಗಳನ್ನು ಅಧ್ಯಯನ ಮಾಡಲು ಗ್ರಂಥಸೂಚಿಯೇ ಆಧಾರವಾಗಿದೆ."

**ಕನ್ನಡದ ಮೊದಲ ಮುದ್ರಿತ ಗ್ರಂಥಸೂಚಿ:**

1864ನೇ ಡಿಸೆಂಬರ್‌ವರೆಗೆ ಬೊಂಬಾಯಿ ಪ್ರಾಂತದಲ್ಲಿ ಪ್ರಕಟವಾಗಿರುವ ದೇಶೀಯ ಪ್ರಕಟನೆಗಳು (Native publications in the Bambay presidency up to December 1864 prepared under orders of Government) ಎಂಬುದೊಂದು ಕ್ಯಾಟಲಾಗು ಪ್ರಕಟವಾಗಿದೆ. ಇದೇ ಕನ್ನಡದ ಮೊದಲ ಮುದ್ರಿತ ಗ್ರಂಥಸೂಚಿ ಎನ್ನಬಹುದು. 1867ರಲ್ಲಿ ಇದರ ಎರಡನೆಯ ಆವೃತ್ತಿ ಪ್ರಕಟವಾಯಿತು. ಅದನ್ನು ಸಂಕಲಿಸಿ ತಯಾರಿಸಿದವರು ಸರ್.ಎ.ಗ್ರಾಂಟ್, ಅವರು.

**ಕೆಲವು ಮಹತ್ವದ ಮುದ್ರಿತ ಗ್ರಂಥಸೂಚಿಗಳು:**

1867ರಲ್ಲಿ ಸರ್.ಎ.ಗ್ರಾಂಟ್ ಪ್ರಕಟಿಸಿದ ಗ್ರಂಥಸೂಚಿ ಅನಂತರ ಕನ್ನಡದಲ್ಲಿ 20ನೇ ಶತಮಾನದಲ್ಲಿ ಕೆಲವು ಮಹತ್ವದ ಗ್ರಂಥಸೂಚಿಗಳು ಪ್ರಕಟವಾಗಿವೆ.

1) 1910ರಲ್ಲಿ ಎಲ್.ಡಿ.ಬಾರ್ನೆಟ್ ಅವರು ಸಿದ್ಧಪಡಿಸಿದ ಬ್ರಿಟಿಷ್ ಮ್ಯೂಸಿಯಂ ಗ್ರಂಥಾಲಯದಲ್ಲಿ ಆವರೆಗೂ ಸಂಗ್ರಹಗೊಂಡಿದ್ದ ಕನ್ನಡ, ಬಡಗ, ಮತ್ತು ಕೊಡಗು, ಗ್ರಂಥಗಳ ಕ್ಯಾಟಲಾಗು ಈ ಸೂಚಿಯಲ್ಲಿ ಆಕಾರ, ಆವೃತ್ತಿ, ಪುಟಸಂಖ್ಯೆ, ಮುಂತಾದ ವಿವರಗಳ ಜೊತೆಗೆ ಆ ಪುಸ್ತಕದ ಸ್ವರೂಪ ಮಹತ್ವಗಳ ವಿಷಯವಾಗಿ ನಾಲ್ಕು ಮಾತು ಹೇಳಿದೆ.

2) ಭಾರತ ಸರ್ಕಾರವು ಇಂಡಿಯನ್ ನ್ಯಾಷನಲ್ ಬಿಬ್ಲಿಯೋಗ್ರಫಿ ಸಂಪುಟಗಳನ್ನು ಪ್ರಕಟಿಸುತ್ತಿದೆ. ಇದರಲ್ಲಿ 1901ರಿಂದ 1953 ರವರೆಗೆ ಪ್ರಕಟವಾಗಿರುವ ಗ್ರಂಥಗಳನ್ನು ಒಳಗೊಂಡಿದೆ ಇದರಲ್ಲಿ ಎರಡನೆಯ ಸಂಪುಟದಲ್ಲಿ ಕನ್ನಡ ಭಾಷೆ ಕೃತಿಗಳ ವಿವರಗಳು ಇವೆ. ಈ ಸೂಚಿಯಲ್ಲಿ ಕೃತಿಯ ಲೇಖಕ, ಶೀರ್ಷಿಕೆ, ಆವೃತ್ತಿ, ಪ್ರಕಟನ ಸ್ಥಳ, ಪ್ರಕಾಶಕರು, ವರ್ಷಧ ಪುಟಸಂಖ್ಯೆ, ಉದ್ದಳತೆ, ಮಾಲಿಕೆ ಇಷ್ಟೂ ವಿವರಗಳಿವೆ.

3) 1956ರಲ್ಲಿ ಭಾರತ ಸಾಹಿತ್ಯ ಅಕಾಡೆಮಿಯವರು ಕನ್ನಡದಲ್ಲಿ ಪ್ರಕಟವಾದ 1200 ಮುಖ್ಯ ಕೃತಿಯ ಪಟ್ಟಿಯೊಂದನ್ನು ಪ್ರಕಟಿಸಿದರು. ಪ್ರಸಿದ್ಧ ಗ್ರಂಥಪಾಲಕ ಕೆ.ಎಸ್.ದೇಶಪಾಂಡೆ, ಅವರು ಸಿದ್ಧಪಡಿಸಿದರು.

4) ಜಿಲ್ಲಾ ಬರಹಗಾರರ ಸೂಚಿಗಳು ಕೆಲವು ಪ್ರಕಟವಾಗಿವೆ ಉತ್ತರ ಕನ್ನಡ ಜಿಲ್ಲಾ ಬರಹಗಾರರು, ಕೋಲಾರ ಜಿಲ್ಲಾ ಬರಹಗಾರರು, ದಕ್ಷಿಣ ಕನ್ನಡ ಬರಹಗಾರರು, ಇಂಥವು.

5) ಸೂಕ್ತಿ ಸುಧಾರ್ಣವ, ಕಾವ್ಯಸಾರ (ವಿದ್ಯಾನಂದ) ಕಾವ್ಯಸಾರ (ಮಲ್ಲಕವಿ) ಇವು ಪ್ರಾಚೀನ ಕಾವ್ಯಗಳಿಂದ ಆರಿಸಿದ ಭಾಗಗಳ ಸಂಕಲನಗಳು – ಶಾಸ್ತ್ರೀಯವಾದ ಅರ್ಥದಲ್ಲಿ ಗ್ರಂಥಸೂಚಿ ಎಂದು ಕರೆಯಿಸಿಕೊಳ್ಳದಿದ್ದರೂ ಈ ಬಗೆಯ ಕೋಶದ ರಚನೆ ಬಹಳ ಹಿಂದಿನಿಂದಲೂ ಬೇರೆ ಬೇರೆ ರೂಪದಲ್ಲಿ ನಡೆದಿದ್ದಕ್ಕೆ ನಿದರ್ಶನವಾಗಿದೆ. ವಿಷಯ ಭಾಗ ಅಧಿಕವಾಗಿರುವ ಗ್ರಂಥಸೂಚಿ ಎಂದು ಈ ಬಗೆಯ ಗ್ರಂಥಗಳನ್ನು ಕರೆಯಬಹುದು. ಪ್ರಾಕ್ಕಾವ್ಯ ಮಾಲಿಕೆ ಮುಂತಾದ ಪಠ್ಯಸಂಗ್ರಹಗಳನ್ನು ಈ ವರ್ಗಕ್ಕೆ ಸೇರಿಸಬಹುದು.

6) **ಕರ್ನಾಟಕ ಕವಿ ಚರಿತೆಯ** 3 ಸಂಪುಟಗಳನ್ನು ಆರ್.ನರಸಿಂಹಾಚಾರ್ ರಚಿಸಿದ್ದಾರೆ. ಇದರಲ್ಲಿ ಕವಿಯ ಕಾಲ, ದೇಶಾದಿವಿವರ, ಓಲೆಗರಿ ಅಥವಾ ಕಾಗದದ ಪ್ರತಿಯ ಆಕಾರ ಸ್ವರೂಪ ಗ್ರಂಥದ ಆರಂಭ ಮುಕ್ತಾಯ, ಕೆಲವು ಉದಾಹರಣೆಗಳು ಇವನ್ನು ಕೊಡುತ್ತವೆ.

7) **ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿ ಸೂಚಿ:** ಸಂಪಾದಕರು ಎಸ್.ಶಿವಣ್ಣ. ಮೈಸೂರು ವಿಶ್ವವಿದ್ಯಾಲಯದ ಪ್ರಕಟನೆ ಇದರಲ್ಲಿ ಕರ್ನಾಟಕ ಕವಿ ಚರಿತೆಯ ಮೂರು ಸಂಪುಟಗಳಲ್ಲಿ ಸೇರಿಲ್ಲದ 1600 ಕೃತಿಗಳ ಬಗ್ಗೆ ವಿವರಗಳಿವೆ.

8) ಶ್ರೀ ವೆಂಕಟೇಶ ಸಾಂಗ್ಲಿ ಅವರ **ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ** ಭಾಗ–1ರಲ್ಲಿ ಹೊಸಗನ್ನಡ ಪ್ರಾರಂಭದ ಕನ್ನಡ ಲೇಖಕರ ಮತ್ತು ಅವರ ಕೃತಿಗಳ ಬಗೆಗೆ ವಿವರಗಳನ್ನು ಒದಗಿಸುತ್ತದೆ. ಇದನ್ನು ಕವಿಚರಿತೆಯ ಮುಂದಿನ ಭಾಗ ಎನ್ನಬಹುದು.

9) **ಒಂದು ಸಾವಿರ ಕನ್ನಡ ಪುಸ್ತಕಗಳು** ಎಂಬ ಕಿರುಹೊತ್ತಿಗೆಯನ್ನು ಶ್ರೀನಿವಾಸ ಹಾವನೂರರು ಪ್ರಕಟಿಸಿದ್ದಾರೆ.

10) **ತ್ರೈಮಾಸಿಕ ಗ್ರಂಥಪಟ್ಟಿಗಳು:** 1867ರ ಭಾರತ ಸರ್ಕಾರದ ವಿಧೇಯಕಾನುಸಾರ ಸರ್ಕಾರಕ್ಕೆ ತಲುಪಿದ ಕನ್ನಡದಲ್ಲಿ ಪ್ರಕಟವಾದ ಗ್ರಂಥಗಳ ಪಟ್ಟಿಯನ್ನು ತ್ರೈಮಾಸಿಕ ಪಟ್ಟಿಗಳ ರೂಪದಲ್ಲಿ ಪ್ರಕಟಿಸಿದೆ. ಇದೇ ರೀತಿ ಮದ್ರಾಸಿನ ಸರಕಾರ ಸಹ ತ್ರೈಮಾಸಿಕ ಪಟ್ಟಿಗಳನ್ನು ಪ್ರಕಟಿಸಿವೆ. ಕನ್ನಡದಲ್ಲಿ ಪ್ರಕಟವಾದ ಗ್ರಂಥಲೋಕ, ಪುಸ್ತಕಲೋಕ ಮೊದಲಾದ ಮಾಸ ಪತ್ರಿಕೆಗಳಲ್ಲಿ ಪ್ರಕಟವಾದನಂತರ, ಗ್ರಂಥವಿವರಗಳನ್ನು ಸ್ವೀಕರಿಸಿದ ಪುಸ್ತಕ ಪಟ್ಟಿಗಳನ್ನು ದಿನಪ್ರತಿಕೆ, ವಾರಪತ್ರಿಕೆಗಳಲ್ಲಿ ಬಂದ ಸ್ವೀಕಾರ ವಿಮರ್ಶಾಗ್ರಂಥಗಳ ವಿವರಗಳನ್ನೂ ಈ ವರ್ಗಕ್ಕೆ ಸೇರಿಸಬಹುದು

11) **ಕನ್ನಡ ಬರಹಗಾರರ ಬಳಗ** ಎಂಬ ಎರಡು ಸಂಪುಟಗಳನ್ನು ದಕ್ಷಿಣ ಕನ್ನಡ ಜಿಲ್ಲೆಯ ಸಿದ್ಧಿಕಟ್ಟೆಯ ಶ್ರೀ ಚಂದ್ರರಾಜಶೆಟ್ಟಿ ತೋಡಾರು ಇವರು ಸಂಪಾದಿಸಿದ್ದಾರೆ. ಇದೊಂದು ವಿಶಿಷ್ಟ ಸೂಚಿ, ಇದರಲ್ಲಿ ಸುಮಾರು 1500 ಬರಹಗಾರರ ವಿವರಗಳಿವೆ. ಬರಹಗಾರರ ಛಾಯಾಚಿತ್ರ ಮತ್ತು ಕೃತಿಗಳ ವಿವರಗಳಿವೆ.

12) **ಏಕವಿಷಯ ಗ್ರಂಥಸೂಚಿಗಳು:** ಹಲವು ಬಂದಿವೆ. ಎಸ್.ಆರ್.ಗುರಂಜಾಳರು. ತಯಾರಿಸಿದ **ಬಸವದರ್ಪಣ** ಎಂಬ ಸೂಚಿಯಲ್ಲಿ ಬಸವಣ್ಣನವರನ್ನು ಕುರಿತು ಪ್ರಕಟವಾಗಿರುವ ಲೇಖನ ಕೃತಿಗಳೆಲ್ಲವನ್ನೂ ಅದು ಸಮಗ್ರವಾಗಿ ಒಳಗೊಂಡಿದೆ.

ಪ್ರಬುದ್ಧ ಕರ್ಣಾಟಕದ 51ನೇ ಸಂಪುಟದಲ್ಲಿ ಪ್ರಕಟವಾದ ಗಾಂಧೀ ಸಂಚಿಕೆಯಲ್ಲಿ ಬಂದ ಗಾಂಧೀಕೃತಿಗಳ ಸೂಚಿ, ನಾ ಕಸ್ತೂರಿ ಪ್ರಕಟಿಸಿದ ಕನ್ನಡದಲ್ಲಿ ಬಂದ ಗಾಂಧೀಕೃತಿಗಳ ಸೂಚಿ, ವ್ಯಕ್ತಿಗಳನ್ನು ಕುರಿತ ವಿಶೇಷ ಸಂಚಿಕೆಗಳ ಸೂಚಿಗಳನ್ನು ಈ ವರ್ಗಕ್ಕೆ ಸೇರಿಸಬಹುದು.

13) **ಏಕ ಕರ್ತೃಸೂಚಿಗಳು:** ಇಲ್ಲಿ ಒಬ್ಬ ಲೇಖಕನಿಗೆ ಸಂಬಂಧಿಸಿದಂತೆ ಅವನ ಕೃತಿ ಲೇಖನಗಳ ಮಾಹಿತಿ ಇರುತ್ತದೆ. ಅಭಿನಂದನ ಗ್ರಂಥಗಳಲ್ಲಿ ಮತ್ತು ಸ್ಮಾರಕ ಗ್ರಂಥಗಳಲ್ಲಿ ಪ್ರಕಟವಾಗುವ ಅನುಬಂಧಗಳು ಈ ವರ್ಗಕ್ಕೆ ಸೇರುತ್ತದೆ. ಗೋವಿಂದ ಪೈ ಸಾಹಿತ್ಯದ ಕುರಿತ ಕಾರಂತ ಅರುವತ್ತು, ಕಾರಂತ ಅಭಿನಂದನ, ದೇಜಗೌ ಅವರ ವ್ಯಕ್ತಿ ಸಾಹಿತ್ಯ ಮೊದಲಾದ ಗ್ರಂಥಗಳು ಈ ವರ್ಗಕ್ಕೆ ಸೇರುತ್ತದೆ. ಅಭಿನಂದನ ಗ್ರಂಥಗಳ ಸೂಚಿಯೊಂದು ಪ್ರಕಟವಾಗಿದೆ. ಕನ್ನಡದಲ್ಲಿ ಇದೊಂದು ವಿಶಿಷ್ಟಸೂಚಿ.

14) **ಪ್ರಕಾಶಕರ ಪ್ರಕಟನೆಗಳ ಪಟ್ಟಿಗಳು:** ಸತ್ಯಶೋಧನ ಪುಸ್ತಕ ಭಂಡಾರ, ಸಾಹಿತ್ಯ ಭಂಡಾರ, ಸ್ವಪ್ನ, ಕಾವ್ಯಾಲಯ, ಸಮಾಜ ಪುಸ್ತಕಾಲಯ, ಬಾಲ ಸಾಹಿತ್ಯ ಮಂಡಲ ಮೊದಲಾದ ನಾನಾ ಪ್ರಕಾಶನ ಸಂಸ್ಥೆಗಳು ಕಾಲಕಾಲಕ್ಕೆ ಪ್ರಕಟಿಸಿದ ಪುಸ್ತಕಪಟ್ಟಿಗಳು ಈಚೆಗೆ ಪ್ರಕಟವಾದ ಗ್ರಂಥಗಳ ವಿವರಗಳನ್ನು ನೀಡುತ್ತವೆ.

15) **ಪ್ರದರ್ಶನ ಸೂಚಿಗಳು:** ವಿಶೇಷ ಗ್ರಂಥಪ್ರದರ್ಶನ ಸಮಾರಂಭಗಳ ವಿಶೇಷ ಸಂಚಿಕೆಗಳಲ್ಲಿ ಸೂಚಿಗಳು ಪ್ರಕಟವಾಗುವುದು. ದಕ್ಷಿಣಭಾಷಾ ಪುಸ್ತಕ ಪ್ರಕಾಶನ (S.L.B.T) 1968ರಲ್ಲಿ ಬೆಂಗಳೂರಿನಲ್ಲಿ ಏರ್ಪಡಿಸಿದ ಪುಸ್ತಕ ಪ್ರದರ್ಶನದ ಗ್ರಂಥಗಳ ಪಟ್ಟಿಯನ್ನು **ಗ್ರಂಥಪರಿಚಯ** ಎಂಬ ಹೆಸರಿನಿಂದ ಪ್ರಕಟಿಸಿದೆ.

### ಮುದ್ರಿತ ಗ್ರಂಥಸೂಚಿಗಳ ವ್ಯಾಪ್ತಿ-ಮಿತಿಗಳು:

ಮುದ್ರಿತ ಗ್ರಂಥಸೂಚಿಗೆ ಹಲವು ಮಿತಿಗಳಿರುತ್ತದೆ: ಕಾಲವ್ಯಾಪ್ತಿಯ ಮಿತಿ ಎಂದರೆ ಒಂದು ನಿರ್ದಿಷ್ಟ ಕಾಲಕ್ಕೆ ಸೀಮಿತಗೊಳಿಸುವುದು. ಉದಾಹರಣೆಗೆ, ಬೆಂ.ವಿ.ವಿ. ದಿಂದ ಪ್ರಕಟವಾಗುತ್ತಿದ್ದ ವಾರ್ಷಿಕ ಸಾಹಿತ್ಯ ಪ್ರಕಟನೆಗಳು. ನಿರ್ದಿಷ್ಟ ವಿಷಯ ಮಿತಿ:- ಒಂದು ವಿಷಯಕ್ಕೆ ಸಂಬಂಧಿಸಿದರಲ್ಲಿ ಒಂದು ಹಂತದವರೆಗೆ ಸೀಮಿತಗೊಳಿಸುವುದು. ಉದಾ:- ದಕ್ಷಿಣ ಕನ್ನಡ ಜಿಲ್ಲೆಯ ಲೇಖಕರ ಸೂಚಿ. ಹೀಗೆ ಹಲವು ಬಗೆಗಳಲ್ಲಿ ಮಿತಿಯುಳ್ಳ ಸೂಚಿಗಳು ಪ್ರಕಟವಾಗಿದೆ. ಪುಸ್ತಕ ಮಾಹಿತಿ ವ್ಯಾಪ್ತಿ ಇದುವರೆಗೆ ಕೇವಲ ಒಂದು ವಿಷಯಕ್ಕೆ, ಒಬ್ಬ ಲೇಖಕನಿಗೆ, ಒಬ್ಬ ಪ್ರಕಾಶಕನಿಗೆ ಸಂಬಂಧಿಸಿದಂತೆ ಪ್ರಕಟವಾಗಿದ್ದವು ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿದ ಕನ್ನಡ ಗ್ರಂಥಸೂಚಿ (ಸುಮಾರು 42 ಸಾವಿರ ಗ್ರಂಥಗಳ ಸೂಚಿ) ಲೇಖಕ-ವಿಷಯ-ಪ್ರಕಾಶಕ ಇತ್ಯಾದಿ ಮಿತಿಮೀರಿದ

ವ್ಯಾಪ್ತಿಗೆ ಒಳಗಾಗಿರುವುದನ್ನು ಕಾಣಬಹುದು. ವರ್ಣನಾತ್ಮಕ ಹಸ್ತಪ್ರತಿ ಗ್ರಂಥಸೂಚಿಗಳಲ್ಲಿ, ಮುಂದೆ ಇಂತಹ ಪ್ರತಿಗಳ ಗ್ರಂಥಸೂಚಿಗಳಲ್ಲೂ ಕೆಲವು ವಿಶಿಷ್ಟ ಗ್ರಂಥ ಸೂಚಿಗಳನ್ನು ಕಾಣಬಹುದು. ಹಸ್ತಪ್ರತಿ ಗ್ರಂಥಸೂಚಿಗಳಲ್ಲಿ ಹಸ್ತಪ್ರತಿಗಳ ಪುಷ್ಪಿಕೆಗಳನ್ನು ಕುರಿತ ವರ್ಣನಾತ್ಮಕ ಹಸ್ತಪ್ರತಿ ಗ್ರಂಥಸೂಚಿಯನ್ನು ರಚಿಸಿದ ಎಸ್.ಶಿವಣ್ಣನವರೇ ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ ರಚಿಸಿದ್ದಾರೆ.[8]

ಈ ಸೂಚಿಯಲ್ಲಿ ಆರ್.ನರಸಿಂಹಾಚಾರ್ ಅವರು ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳನ್ನು (1907–1929) ಹೊರತಂದು ಈ ಸಂಪುಟಗಳ ಪ್ರಕಟಣೆ ನಂತರ ಅನೇಕ ವಿದ್ವಾಂಸರು ಹಲವಾರು ಕೃತಿಗಳ ಬಗೆಗೆ ಲೇಖನಗಳ ಮೂಲಕ ಬೆಳಕು ಚೀರಿದರು. ಹೀಗೆ ಬೆಳಕಿಗೆ ಬಂದ ಕೃತಿಗಳ ಪರಿಚಯವನ್ನು ಅಭ್ಯಾಸಿಗಳಿಗೆ ಒಂದೆಡೆ ಸಿಗುವಂತೆ ಮಾಡಿದ, ಚದುರಿದ ಸಂಗತಿಗಳ ಸಂಗ್ರಹವಾಗಿ 'ಕರ್ನಾಟಕ ಕವಿಚರಿತೆಯ' ಅನುಕ್ತ ಕೃತಿಸೂಚಿ ಈ ಸೂಚಿಯಲ್ಲಿ 19ನೇ ಶತಮಾನದ ಪ್ರಾಚೀನ ಕೃತಿಗಳನ್ನು ಪ್ರಕಟಿಸಿದವರನ್ನು ಪಠ್ಯ ಪುಸ್ತಕ ಲೇಖಕರನ್ನು ಸೇರಿಸಲಾಗಿದೆ. ಪ್ರತಿ ಕೃತಿಯ ಬಗ್ಗೆ ಕೃತಿ ಹೆಸರು, ಕರ್ತೃ ಕಾಲ ಎಂಬುದನ್ನು ವಿಶೇಷ ವಿಷಯ ಎಂಬ ಕಾಲಂಗಳಲ್ಲಿ ಮಾಹಿತಿ ಕೊಟ್ಟಿದ್ದಾರೆ. ಹೀಗೆ ಹಲವಾರು ವಿಶಿಷ್ಟ ಸೂಚಿಗಳು ಕನ್ನಡದಲ್ಲಿ ಈಚೆಗೆ ಪ್ರಕಟವಾಗಿವೆ. ಉದಾಹರಣೆಗೆ, ಗಾಂಧಿ ಸಾಹಿತ್ಯ ಸಂಘ ಪ್ರಕಟಿಸಿರುವ ಕನ್ನಡದಲ್ಲಿ ಪ್ರಕಟವಾದ ಗಾಂಧಿ ಗ್ರಂಥ ಸಾಹಿತ್ಯ ಸೂಚಿ, ಹಾಮಾನಾ ಅವರು ಸಂಪಾದಿಸಿದ ಕನ್ನಡ ಜನಪದ ಗ್ರಂಥ ಸೂಚಿಗಳನ್ನು ಗಮನಿಸಬಹುದು. ಬಸವ ಸಾಹಿತ್ಯ ದರ್ಪಣ (ಬಸವ ಸಮಿತಿ ಪ್ರಕಟನೆ 1967) ಇಂತಹುದೇ ಇನ್ನೊಂದು ಪ್ರಕಟನೆ ಆಗಿದೆ.

### ಹಸ್ತಪ್ರತಿ ಸೂಚಿಗಳು:

ಹಸ್ತಪ್ರತಿ ಸೂಚಿಗಳ ಬಗ್ಗೆ ಪ್ರಸ್ತಾಪ ಮಾಡುವ ಮುನ್ನ ಹಸ್ತಪ್ರತಿ ಎಂದರೇನು? ಎಂಬುದರ ಬಗ್ಗೆ ವಿಚಾರ ಮಾಡುವುದು ಅಗತ್ಯವಿದೆ. ಹಸ್ತಪ್ರತಿ ಎನ್ನುವ ಪದ ಇಂಗ್ಲಿಷ್‌ನ ಮ್ಯಾನ್ಯುಸ್ಕ್ರಿಪ್ಟ್ ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಕೆಗೆ ಬಂದಿರುವ ಪದ. ಈ ಪದ ಕಿಟ್ಟೆಲ್ ನಿಘಂಟಿನಲ್ಲಿ ಮತ್ತೆ ಕೆಲವು ಕನ್ನಡ ನಿಘಂಟುಗಳಲ್ಲಿ ಇಲ್ಲ, ಮತ್ತೆ ಕೆಲವು ನಿಘಂಟುಗಾರರು ಹೀಗೆ ಹೇಳಿದ್ದಾರೆ. ರೆವರೆಂಡ್ ಎಫ್.ಝೀಗ್ಲರ್[9]. ಇಂಗ್ಲಿಷ್–ಕನ್ನಡ ಡಿಕ್ಷನರಿಯಲ್ಲಿ (1886) ಕೈಬರಹದ ಪುಸ್ತಕ, ಹಸ್ತಲೇಖ ಎಂಮೂ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ, ಕೈಬರಹದ ಪ್ರತಿ, ಹಸ್ತಪ್ರತಿ ಎಂದಿದ್ದಾರೆ. ಜಿ. ವೆಂಕಟಸುಬ್ಬಯ್ಯನವರು ಪ್ರಿಸಂನ ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ ಕೈಬರಹದ ಪುಸ್ತಕ, ಹಸ್ತಲಿಖಿತ ಪುಸ್ತಕ, ಬೆರಳಚ್ಚಿನಪ್ರತಿ ಎಂದಿದ್ದಾರೆ. ಸುಭಾಷ್ ಕನ್ನಡ–ಇಂಗ್ಲಿಷ್

ನಿಘಂಟಿನಲ್ಲಿ ಎಲ್.ಎಸ್. ಶೇಷಗಿರಿರಾಯರು ಕೈಬರಹದ ಪ್ರತಿ, ಹಸ್ತಪ್ರತಿ, ಕೈಯಲ್ಲಿ ಬರೆದಿದ್ದು ಎಂದಿದ್ದಾರೆ.

ಇನ್ನು ಕೆಲವರು ಪದಕ್ಕೆ ಪ್ರತಿಪದ ಜತೆಗೆ ವಿವರಣೆಯನ್ನು ಕೆಲವು ನಿಘಂಟುಕಾರರು ಕೊಟ್ಟಿದ್ದಾರೆ. ಪ್ರಿ.ಸಂ. ಕನ್ನಡ ಕ್ಲಿಷ್ಟಪದ ಕೋಶದಲ್ಲಿ ಜಿ.ವೆಂಕಟಸುಬ್ಬಯ್ಯನವರು ಗ್ರಂಥಗಳನ್ನು ಓಲೆಯ ಕಾಗದ ಮುಂತಾದವುಗಳಲ್ಲಿ ಬರೆದ ಕೈಬರಹದ ಪ್ರತಿ; ಅಚ್ಚಾಗದ ಮೊದಲಿನ ಪ್ರತಿ ಎಂದು ವಿವರಿಸಿದ್ದಾರೆ.[10] ಕನ್ನಡ ನಿಘಂಟಿನಲ್ಲಿ "1. ಗ್ರಂಥವನ್ನು ಓಲೆ ಅಥವಾ ಕಾಗದ ಮುಂತಾದುವುಗಳಲ್ಲಿ ಬರೆದ ಕೈಬರಹದ ಪ್ರತಿ, 2. ಮುದ್ರಣವಾಗದ ಯಾವುದೇ ಬರಹದ ಪ್ರತಿ, 3. ಅಚ್ಚಾಗದ ಮೊದಲಿನ ಪ್ರತಿ. ಪರಿಷತ್ತಿನ ನಿಘಂಟು ಕೊಟ್ಟ ಈ ವಿವರಣೆಗೆ ಆಕ್ಸ್‌ಫರ್ಡ್ ಅಡ್ವಾನ್ಸ್‌ಡ್ ಲರ್ನರ್ಸ್ ಡಿಕ್ಷನರಿಯಲ್ಲಿ ಕೊಟ್ಟ ವಿವರಣೆ ಆಧಾರವಾಗಿರುವಂತೆ ಕಾಣುತ್ತದೆ. ಅಲ್ಲಿಯ ವಿವರಣೆ ಹೀಗಿದೆ. "ಥಿಂಗ್ಸ್ ರಿಟನ್ ಬೈ ಹ್ಯಾಂಡ್; ಆಥರ್ಸ್‌ವರ್ಕ್‌ವೆನ್ ರಿಟನ್ ಆರ್ ಟೈಪ್ಡ್ (ನಾಟ್‌ಯೆಟ್‌ಎ ಪ್ರಿಂಟೆಡ್ ಬುಕ್). ಆದರೆ ಈ ಎಲ್ಲ ವಿವರಣೆಗಳಿಗಿಂತ ಬಿ.ಕೆ. ಹಿರೇಮಠರು ಕನ್ನಡ ಹಸ್ತಪ್ರತಿ; ಒಂದು ಅಧ್ಯಯನ (ಪುಟ 9–10ರಲ್ಲಿ) ಕಲಬುರ್ಗಿ ಅವರ ಹಸ್ತಪ್ರತಿ ವಿವರಣೆಯನ್ನು ವಿಮರ್ಶಿಸಿ ಕೊಟ್ಟ ವ್ಯಾಖ್ಯೆ ಅರ್ಥಪೂರ್ಣವಾಗಿದೆ. "ಭಾರವಲ್ಲದ ಲೇಖ್ಯ ವಸ್ತುವಿನ ಮೇಲೆ ಕೈಯಿಂದ ಬರೆದ ಜೀವನಾವಶ್ಯಕ ಜ್ಞಾನಪ್ರಸಾರವಾದ ಕೃತಿ ಮತ್ತು ಅದರ ಪ್ರತಿ ಕೃತಿಗಳು ಹಸ್ತಪ್ರತಿಗಳು."

ಗ್ರಂಥ ಸಂಪಾದನ ಶಾಸ್ತ್ರಾನುಸಾರ ಸಂಪಾದಿಸಲ್ಪಟ್ಟ ಗ್ರಂಥಗಳು ಅಚ್ಚಾದ ಕಾರಣ ಅವು ಮುದ್ರಿತ ಪ್ರತಿಗಳಾಗಿ ಪರಿಗಣಿಸಲ್ಪಟ್ಟಿರುತ್ತವೆ. ಆದ್ದರಿಂದ ಮ್ಯಾನುಸ್ಕ್ರಿಪ್ಟ್–ಹಸ್ತಪ್ರತಿ ಎಂದಾಗ ಅಚ್ಚಾಗದೆ ಕೈಯಲ್ಲಿ ಬರೆದಿರುವ ಪ್ರತಿ ಎಂದೇ ಅರ್ಥಮಾಡಬೇಕು. ಇಂಥ ಹಸ್ತಪ್ರತಿಗಳ ಸೂಚೀಕರಣಕಾರ್ಯ ಹಸ್ತಪ್ರತಿ ಶಾಸ್ತ್ರದ ಒಂದಂಗವಾಗಿದೆ. ಕನ್ನಡದಲ್ಲಿ ಪ್ರಕಟಿತ ಹಸ್ತಪ್ರತಿ ಸೂಚಿಗಳನ್ನು ಎಸ್ ಶಿವಣ್ಣನವರು "ಹಸ್ತಪ್ರತಿ ಸೂಚಿಗಳು ಮತ್ತು ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳು ಎಂದು ಎರಡು ಭಾಗಗಳಾಗಿ ವರ್ಗೀಕರಿಸಬಹುದಾಗಿದೆ ಎಂದಿದ್ದಾರೆ. ಇದರಲ್ಲಿ ಎರಡನೆಯದಾದ ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳಲ್ಲಿ ಹಸ್ತಪ್ರತಿ ಸೂಚಿಗಳಿಗಿಂತ ಹೆಚ್ಚಿನ ವಿವರಗಳು ಎಂದರೆ ಕೃತಿಯ ಉದ್ದ, ಅಗಲಗಳ ಉಲ್ಲೇಖ, ಪತ್ರಸಂಖ್ಯೆ, ಪ್ರತಿಪತ್ರದಲ್ಲಿನ ಪಂಕ್ತಿಗಳು ಹಾಗೂ ಪ್ರತಿ ಪಂಕ್ತಿಯಲ್ಲಿನ ಅಕ್ಷರಗಳು, ಕೃತಿಯ ಆದಿ, ಅಂತ್ಯಗಳ ಉಲ್ಲೇಖ ಈ ಹಲವಾರು ಸಂಗತಿಗಳು ಕ್ರಮಬದ್ಧವಾಗಿ ರೂಪಿತವಾಗಿರುತ್ತದೆ."[11] (ಹಸ್ತಪ್ರತಿ ಶಾಸ್ತ್ರ ಪುಟ 69–70 ಎಸ್.ಶಿವಣ್ಣ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ 1983) ಎಂ.ಎಂ.ಕಲಬುರ್ಗಿ ಅವರು ತಮ್ಮ ಕನ್ನಡ ಹಸ್ತಪ್ರತಿ ಶಾಸ್ತ್ರ ಗ್ರಂಥದಲ್ಲಿ (ಪು 103–104) 3 ಬಗೆಯಾಗಿ ಹಸ್ತಪ್ರತಿಸೂಚಿಗಳನ್ನು ವರ್ಗೀಕರಿಸುತ್ತಾರೆ.

"ಕೆಲವೇ ವಿವರಗಳನ್ನು ತೋರಿಸಿಕೊಡುವುದು ಸೂಚಿ; ಎಲ್ಲ ವಿವರಗಳನ್ನು ತೋರಿಸಿಕೊಡುವುದು ವಿವರಣಾತ್ಮಕ ಸೂಚಿ; ಇನ್ನೊಂದು ಬಗೆಯೆಂದರೆ, ಒಂದು ಕೃತಿಯ ಪ್ರತಿಗಳು ಯಾವ ಯಾವ ಸ್ಥಳಗಳಲ್ಲಿ ಇದೆಯೆಂಬುದನ್ನು ವಿಶಿಷ್ಟ ವಿವರಗಳೊಂದಿಗೆ ತೋರಿಸಿ ಕೊಡುವ ಸಮಗ್ರಸೂಚಿ; ಈ ಮೂರರಲ್ಲಿ ಸೂಚಿಯೆನ್ನುವುದು ಹಸ್ತಪ್ರತಿ ಆದರೂ ಕೃತಿಯ ಶೀರ್ಷಿಕೆ, ಕವಿನಾಮ, ಪ್ರಕಾರ ಇಷ್ಟು ವಿವರಗಳ ಕಾಲಂಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಹೊಂದಿಸಲಾಗುತ್ತದೆ. ಇದಕ್ಕೆ ಬದಲು ಕವಿನಾಮಗಳನ್ನು ಅಕಾರಾದಿಯಾಗಿ ಹೊಂದಿಸಬಹುದು. ಆಗ, ಶೀರ್ಷಿಕೆ ಕವಿನಾಮ ಕಾಲಂ ಪಲ್ಲಟವಾಗುತ್ತದೆ. ಕವಿನಾಮದ ಕೆಳಗೆ ಅವನ ಕೃತಿಗಳನ್ನು ಅಕಾರಾದಿಯಾಗಿ ಹೊಂದಿಸಬೇಕು. ಮೂರನೆಯದಾಗಿ ಕೃತಿಗಳನ್ನು ಪ್ರಕಾರವಾಗಿ ವರ್ಗೀಕರಿಸಿ ಆಯಾ ಪ್ರಕಾರದ ಕೆಳಗೆ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಜೋಡಿಸಬೇಕು. ಇದು ತೀರಾ ಸಾಮಾನ್ಯ ಸೂಚಿ ಆಗಿದ್ದು, 'ದರ್ಶಕಸೂಚಿ ಎಂದು ಇಂಥವುಗಳನ್ನು ಕರೆಯಬಹುದು ಎಂದಿದ್ದಾರೆ"[12]

ಈ ವಿವರಣೆಯ ಹಿನ್ನೆಲೆಯಲ್ಲಿ ದರ್ಶಕ ಸೂಚಿಯನ್ನೇ ಸಂಕ್ಷಿಪ್ತ ಸೂಚಿ ಅಥವಾ ಸಾಮಾನ್ಯ ಸೂಚಿ ಎಂದು ಕರೆಯಬಹುದು. ಇನ್ನು ಕಲಬುರ್ಗಿ ಅವರು ವಿವರಿಸಿರುವ 3 ಬಗೆಗಳನ್ನು ಲೇಖಕಸೂಚಿ, ಗ್ರಂಥಸೂಚಿ, ವಿಷಯಸೂಚಿ(Author index, Book Index, subject index.) ಎಂದು ಕರೆಯಬಹುದಾಗಿದೆ. ವರ್ಣನಾತ್ಮಕ ಸೂಚಿಯನ್ನು ವಿವರಣಾತ್ಮಕ ಸೂಚಿ ಎಂದು ಕರೆದಿದ್ದಾರೆ. "ಇದನ್ನು ಕಾರ್ಡಿನಲ್ಲಿ ದಾಖಲಿಸಬಹುದು: ಗ್ರಂಥರೂಪದಲ್ಲಿ ಪ್ರಕಟಿಸಬಹುದು. ಇವುಗಳನ್ನು ಕ್ರಮವಾಗಿ ಪತ್ರಕಸೂಚಿ, ಪುಸ್ತಕಸೂಚಿ ಎಂದು ಕರೆಯಬಹುದಾಗಿದೆ.

**ಸಮಗ್ರ ಸೂಚಿ:**

ಇನ್ನು ಸಮಗ್ರಸೂಚಿಯನ್ನು ಕಲಬುರ್ಗಿ ಹೀಗೆ ವಿವರಿಸಿದ್ದಾರೆ. "ಸಮಗ್ರ ಸೂಚಿ ಎನ್ನುವುದು ಕೃತಿ ಶೀರ್ಷಿಕೆಯ ಸೂಚಿ ಆಗಿದ್ದು ಇಲ್ಲಿ ಎಲ್ಲ ಶೀರ್ಷಿಕೆಗಳನ್ನು ಅಕಾರಾದಿಯಲ್ಲಿ ಹೊಂದಿಸಲಾಗುತ್ತದೆ. ಒಂದು ಕೃತಿ ಶೀರ್ಷಿಕೆ ಬರೆದು ಅದರ ಪ್ರತಿಗಳು ಎಲ್ಲೆಲ್ಲಿ ದೊರೆಯುತ್ತವೆ. ಎಂಬುದಕ್ಕೆ ವಿವರಗಳನ್ನು ಸೂಕ್ತ ಸಂಕೇತಗಳೊಂದಿಗೆ ಕೊಡಲಾಗುತ್ತದೆ. ಲಭ್ಯ ಕೃತಿಗಳೊಂದಿಗೆ ಅಲಭ್ಯ ಕೃತಿಗಳ ಉಲ್ಲೇಖವೂ ಅಲ್ಲಿ ಸೇರಿಕೊಂಡಿರುತ್ತದೆ. ಸೂಚಿಯಿಂದ ವಿವರಗಳನ್ನು ಸ್ವೀಕರಿಸಿದ್ದರೆ ಆ ಸೂಚಿಯನ್ನು ಸಂಕೇತದೊಂದಿಗೆ ದಾಖಲಿಸಲಾಗಿರುತ್ತದೆ. ಕೃತಿ ಪ್ರಕಟವಾಗಿದ್ದರೆ ಆ ಪ್ರಕಟನೆಯ ವಿವರಗಳನ್ನು ಪ್ರಕಟವಾಗದೆ ಇದ್ದರೆ, ಪರಿಚಯಾತ್ಮಕ ಲೇಖನ ಬೆಳಕು ಕಂಡಿದ್ದರೆ, ಆ ಲೇಖನದ ವಿವರಗಳನ್ನು

ಕೊಡಲಾಗುತ್ತದೆ. ಕೃತಿ ಬೇರೆ ಭಾಷೆಯಿಂದ ಅನುವಾದಗೊಂಡಿದ್ದರೆ, ಬೇರೆ ಭಾಷೆಗಳಿಗೆ ಅನುವಾದಗೊಂಡಿದ್ದರೆ, ಆ ಸೂಚನೆಯನ್ನು ಇದು ಒಳಗೊಂಡಿರುತ್ತದೆ. ಕವಿಯ ಬಗ್ಗೆ ಗ್ರಂಥ ಮತ್ತು ಲೇಖನಿ ರೂಪದ ವಿವರಗಳಿದ್ದಲ್ಲಿ ಅವುಗಳನ್ನು ಸೂಚಿಸಲಾಗುತ್ತದೆ. ಹೀಗೆ ಅಂಗೈ ಮೇಲೆ ಒಂದು ಕೃತಿಯ ಸಮಸ್ತ ಪ್ರತಿಗಳ ಬಗ್ಗೆ ತಿಳಿವಳಿಕೆ ಮಾಡಿಕೊಡುವುದೇ ಈ ಸಮಗ್ರ ಸೂಚಿಯ ಮುಖ್ಯ ಗುರಿಯಾಗುತ್ತದೆ."[13]

## ಕನ್ನಡ ಹಸ್ತಪ್ರತಿಗಳ ಸಮಗ್ರ ಗ್ರಂಥಸೂಚಿ ವಿಚಾರ

ಸಮಗ್ರ ಗ್ರಂಥ ಸೂಚಿಯ ಸಾಮಾನ್ಯ ಲಕ್ಷಣಗಳನ್ನು ಆಂಗ್ಲ ಸೂಚಿ ಹಿನ್ನೆಲೆಯಲ್ಲಿ ಕಲಬುರ್ಗಿ ವಿವರಿಸಿದ್ದಾರೆ ಆದರೆ ಎಸ್.ಶಿವಣ್ಣನವರು ಕನ್ನಡ ಗ್ರಂಥಗಳ ಹಿನ್ನೆಲೆಯಲ್ಲಿ ಮುಂದಿಟ್ಟ ವಿಚಾರಗಳು ಗ್ರಾಹ್ಯವಾಗಿದೆ. ಹಸ್ತಪ್ರತಿಗಳ ಸಮಗ್ರ ಸೂಚಿ ( Eanalogus Eanalogoram) ಜರ್ಮನ್ ವಿದ್ವಾಂಸ ಆಫ್ರೆಕ್ಟ್ ಪ್ರಕಟಿಸಿದ ಸೂಚಿ ಇದೇ ಮಾದರಿಯಲ್ಲಿದೆ. ಹೆಚ್.ಡಿ.ವೇಲಂಕರ್ ಅವರು ಜೈನ ಹಸ್ತಪ್ರತಿಗಳ ಜಿನರತ್ನಕೋಶ ರಚಿಸಿ ಪ್ರಕಟಿಸಿದ್ದಾರೆ ಈ ಸಮಗ್ರಸೂಚಿಗಳ ಹಿನ್ನೆಲೆಯಲ್ಲಿ ಕನ್ನಡ ಸಮಗ್ರ ಸೂಚಿ ರಚನೆಗೆ ಉಪಯುಕ್ತ ವಾಗುವ ಅಂಶಗಳನ್ನು ಎಸ್.ಶಿವಣ್ಣ ಅವರು ಹೀಗೆ ಪಟ್ಟಿ ಮಾಡಿದ್ದಾರೆ[14].

1. ಸೂಚಿ ಅಕಾರಾದಿ ಕ್ರಮದಲ್ಲಿರುತ್ತದೆ.
2. ಒಬ್ಬಕವಿಯ ಉಲ್ಲೇಖದೊಡನೆ ಆತನ ಸಮಗ್ರ ಲಭ್ಯ ಹಾಗೂ ಅಲಭ್ಯ ಕೃತಿಗಳ ಉಲ್ಲೇಖ ಒಂದೆಡೆ ಬರುತ್ತದೆ.
3. ಒಂದು ಕೃತಿಯ ಉಲ್ಲೇಖದೊಡನೆ ಆ ಕೃತಿಯ ಬೇರೆ ಬೇರೆ ಪ್ರತಿಗಳು ಎಲ್ಲೆಲ್ಲಿ ದೊರೆಯುತ್ತದೆ. ಎಂಬುದರ ವಿವರಗಳಲ್ಲಿ ಸೂಕ್ತ ಸಂಕೇತಗಳೊಡನೆ ಒಂದೆಡೆಯು ಬರುತ್ತದೆ.
4. ಮುದ್ರಿತ ಹಸ್ತಪ್ರತಿಗಳ, ವರ್ಣನಾತ್ಮಕ ಸೂಚಿಗಳ, ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸೂಚಿಗಳ ಉಲ್ಲೇಖನಗಳನ್ನು ಸೂಕ್ತ ಸಂಕೇತಗಳೊಡನೆ ಸೂಚಿಸಿರುತ್ತದೆ.
5. ಕೃತಿ ಪ್ರಕಟವಾಗಿದ್ದರೆ ಪ್ರಕಟನೆಗೆ ಸಂಬಂಧಿಸಿದ ಮುದ್ರಣದ ವಿವರಗಳನ್ನು (ಆವೃತ್ತಿಗಳನ್ನು ಗಮನಿಸಿ) ಕೊಟ್ಟಿರುತ್ತದೆ.
6. ಕೃತಿ ಪ್ರಕಟವಾಗದೆ ಆ ಬಗೆಗೆ ಪರಿಚಯಾತ್ಮಕ ಲೇಖನ ಪ್ರಕಟವಾಗಿದ್ದರೆ ಆ ಲೇಖನದ ಪ್ರಕಟಿತ ವಿವರಗಳನ್ನು ಸೂಚಿಸಿರುತ್ತದೆ.
7. ಕೃತಿ ಬೇರೆ ಬೇರೆ ಭಾಷೆಗಳಲ್ಲಿ ಅನುವಾದಗೊಂಡಿದ್ದರೆ. ಅಥವಾ ಪ್ರಭಾವ ಬೀರಿದ್ದರೆ ಆವಿವರಗಳನ್ನು ಸೂಚಿ ಒಳಗೊಂಡಿರುತ್ತದೆ
8. ಕವಿಗಳ ಬಗೆಗೆ ಬರೆಯಲಾದ ಪ್ರಕಟಿತ ಹಾಗೂ ಅ ಪ್ರಕಟಿತ ರೂಪಗಳಲ್ಲಿನ ಮಹಾ

ಪ್ರಬಂಧಗಳ ಉಲ್ಲೇಖ ಸೂಚಿಯಲ್ಲಿರುತ್ತದೆ.

9. ಸಾಹಿತ್ಯ ಚರಿತ್ರೆ ಆ ಕೃತಿಗಳಲ್ಲಿ ಕವಿ, ಕೃತಿಗಳಿಗೆ ಬಗೆಗೆ ದೊರಕುವ ಸಂಗತಿಗಳನ್ನು ಸೂಚಿಸಿರುತ್ತದೆ.
10. ಕವಿ–ಕಾಲ–ಕೃತಿಗಳ ಬಗೆಗೆ ಆದಷ್ಟೂ ಸಮಕಾಲೀನ ಸಂಶೋಧನೆಯ ವಿವರಗಳನ್ನು ಸೂಚಿ ಒಳಗೊಂಡಿರುತ್ತದೆ.

## ಸಮಗ್ರಸೂಚಿ ಕಾರ್ಯಯೋಜನೆ

ಹಸ್ತಪ್ರತಿಗಳ ಸಮಗ್ರ ಗ್ರಂಥಸೂಚಿ ನಿರ್ಮಾಣದ ಕಾರ್ಯಕ್ಕೆ ಹಿನ್ನೆಲೆಯಾಗಿ ಉಪಲಬ್ಧ ಹಸ್ತಪ್ರತಿಗಳ ವಿವರಗಳನ್ನೆಲ್ಲ ಮೊದಲು ಸಂಗ್ರಹಿಸಿ ಮುದ್ರಿಸುವುದು ಮೊದಲು ಮಾಡಬೇಕಾದ ಕೆಲಸವಾಗಿದೆ. ನಾ.ಗೀತಾಚಾರ್ಯರು ಹೇಳುವಂತೆ " ಈವರೆಗೆ 80 ಸೂಚಿಗಳು ಪ್ರಕಟವಾಗಿವೆ ಅವುಗಳಲ್ಲಿ ಸುಮಾರು 15 ಲೇಖನರೂಪದಲ್ಲಿವೆ. 1970ರವರೆಗೆ ಲೇಖನಗಳನ್ನು ಒಳಗೊಂಡಂತೆ 50 ಸೂಚಿಗ್ರಂಥಗಳು ಪ್ರಕಟವಾಗಿದ್ದರೆ ಗ್ರಂಥಸೂಚಿ ತತ್ವದ ಅನ್ವಯ ಕೇವಲ 30 ಗ್ರಂಥಗಳು ಬಂದಿವೆ" ಪ್ರಕಟಿತ ಹಸ್ತಪ್ರತಿ ಸಮಗ್ರ ಸೂಚಿ ಪ್ರಕಟನೆಗೆ ನೆರವಾಗುವ ಕೆಲವು ಸೂಚನೆಗಳನ್ನು ನಾ.ಗೀತಾಚಾರ್ಯರು ಕನ್ನಡ ಹಸ್ತಪ್ರತಿಕಾರ್ಯ ಲೇಖನದಲ್ಲಿ ಹೀಗೆ ಸೂಚಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಿದೆ[15].

1. ರಾಜ್ಯ ಕೇಂದ್ರ ಸರ್ಕಾರಗಳಿಂದ ಹಸ್ತಪ್ರತಿ ಇಲಾಖೆಗಳ ಸ್ಥಾಪನೆ
2. ರಾಜ್ಯಮಟ್ಟದಲ್ಲಿ ಒಂದೊಂದು ಕೇಂದ್ರ ಹಸ್ತಪ್ರತಿ ಭಂಡಾರಗಳನ್ನು ಸ್ಥಾಪಿಸುವುದು
3. ಆಯಾ ರಾಜ್ಯದ ಎಲ್ಲ ಸಂಸ್ಥೆಗಳ–ವ್ಯಕ್ತಿಗಳಲ್ಲಿರುವ ಹಸ್ತಪ್ರತಿಗಳನ್ನು ಸಂಗ್ರಹಿಸುವುದು.
4. 'ಸೂಚಿಗಳ ಸೂಚಿ' ತಯಾರಿಕೆ.
5. ಅಪ್ರಕಟಿತ ಗ್ರಂಥಗಳ ಪ್ರಕಟನೆ ಮತ್ತು ಸೂಚಿಯಾಗದೆ ಇರುವ ಹಸ್ತಪ್ರತಿಗಳ ಸೂಚಿ ತಯಾರಿಕೆಗೆ ವ್ಯಾಪಕವಾದ ಯೋಜನೆ ರೂಪಿಸಿ ಆದಷ್ಟು ಬೇಗ ಈ ಕಾರ್ಯ ಪೂರೈಸುವುದು.

## ಹಸ್ತಪ್ರತಿಗಳ ಸೂಚಿಗಳ ಪಟ್ಟಿಗಳ ಸಿದ್ಧತಾ ಸಮಸ್ಯೆ:

ಕಲಬುರ್ಗಿ ಅವರು ಪ್ರಕಟಿತ ಹಸ್ತಪ್ರತಿ ಸೂಚಿಗಳ ಸಂಪುಟಗಳ ಬಗ್ಗೆ ಹೇಳುವಾಗ " ಶೀರ್ಷಿಕೆ ನಿಷ್ಠ ಎಂದರೆ ಗ್ರಂಥಗಳನ್ನು ಅಕಾರಾದಿ ಪ್ರಕಾರ ವಿವರಣೆಗಳನ್ನು ನೀಡುವ ಸೂಚಿಗಳ ಪ್ರಕಟವಾಗಿರುವುದರ ಬಗ್ಗೆ ಹೇಳುತ್ತಾ ಸಮಸ್ಯೆಯೊಂದನ್ನು ಮುಂದಿಡುತ್ತಾರೆ. "ಮೈಸೂರು ಕನ್ನಡ ಅಧ್ಯಯನ ಸಂಸ್ಥೆ ಶೀರ್ಷಿಕೆನಿಷ್ಠ ವಿವರಣಾತ್ಮಕ ಸೂಚಿಗಳನ್ನು ಮದ್ರಾಸ್ ಪ್ರಾಚ್ಯ ಹಸ್ತಪ್ರತಿ ಭಂಡಾರ ವಿಷಯ ವರ್ಗೀಕೃತ, ಶೀರ್ಷಿಕೆ ನಿಷ್ಠ ವಿವರಣಾತ್ಮಕ ಸೂಚಿಗಳನ್ನು ಪ್ರಕಟಿಸಿದೆ ಈಎರಡೂ ಬಗೆಗಳಲ್ಲಿ ವಿಷಯ ವರ್ಗೀಕೃತ, ಶೀರ್ಷಿಕೆನಿಷ್ಠ ವಿವರಣಾತ್ಮಕ ಸೂಚಿ ಸ್ವಲ್ಪ ಗೊಂದಲವನ್ನುಂಟುಮಾಡುತ್ತವೆ. ಏಕೆಂದರೆ ಯಾವುದೇ

ಕೃತಿ ಧಾರ್ಮಿಕವರ್ಗದ್ದೋ, ಧಾರ್ಮಿಕ ವರ್ಗದಲ್ಲಿ, ಚರಿತ್ರೆವರ್ಗದಲ್ಲಿ, ಅಥವಾ ಪುರಾಣವರ್ಗದಲ್ಲಿ ಅದು ಸೇರುತ್ತದೆ ಎಂದು ಬಿಡಿಸಿ ಹೇಳಲಾಗದ ತೊಡಕುಗಳಿರುತ್ತವೆ."

ಈ ಸಮಸ್ಯೆಗೆ ಪರಿಹಾರವನ್ನು ಅವರು ಸೂಚಿಸುವುದು ಹೀಗೆ 100 ಕಟ್ಟುಗಳಿಗೆ ಒಂದರಂತೆ ಸೂಚೀ ಸಂಪುಟಗಳನ್ನು ಪ್ರಕಟಿಸಬೇಕು ಪ್ರತಿ 100 ಕಟ್ಟುಗಳ ಗ್ರಂಥಗಳನ್ನು ಅಕಾರಾದಿಯಾಗಿ ಹೊಂದಿಸಿಕೊಂಡು ಸೂಚಿ ರಚಿಸಬೇಕು. ಹೀಗೆ ಮಾಡಿದರೆ ಹಸ್ತ ಪ್ರತಿಭಂಡಾರಕ್ಕೆ ಹಸ್ತಪ್ರತಿಗಳು ಆಕರಣೆ ಆಗುತ್ತಾ ಹೋದಂತೆಲ್ಲಾ ಈ ಸೂಚೀ ಸಂಪುಟಗಳನ್ನು ಕ್ರಮವಾಗಿ ಬೆಳಸಲು ಅನುಕೂಲವಾಗುತ್ತದೆ. ಎಂದಿದ್ದಾರೆ. ಪ್ರತಿಯೊಂದು ಸೂಚೀ ಸಂಪುಟದ ಕೊನೆಗೆ ವಿಷಯ ವರ್ಗೀಕೃತ ಅನುಬಂಧ, ಲೇಖಕ ವರ್ಗೀಕೃತ ಅನುಬಂಧಗಳನ್ನು ಜೋಡಿಸಬೇಕು, ಇದರಿಂದ ಒಂದೇ ಸಂಪುಟದಲ್ಲಿ ಮೂರು ಬಗೆಯ ಶೀರ್ಷಿಕೆ-ವಿಷಯ-ಲೇಖಕ ಸೂಚಿಗಳು ಅಳವಟ್ಟಂತಾಗುತ್ತದೆ."[16]

ಕಲಬುರ್ಗಿ ಅವರ ಈ ಸೂಚನೆಯಲ್ಲಿ 100 ಕಟ್ಟುಗಳಿಗೆ ಒಂದು ಸೂಚಿ ಸಂಪುಟ ಮಾಡುವ ಯೋಜನೆ ಸರಿಯಲ್ಲ ಮತ್ತು ಸಾಧ್ಯವೂ ಇಲ್ಲ. ಏಕೆಂದರೆ ಒಂದು ನಿರ್ದಿಷ್ಟ ಗಾತ್ರದಲ್ಲಿ ಪುಟಗಳ ವ್ಯಾಪ್ತಿಯಲ್ಲಿ ಒಂದೊಂದು ಸಂಪುಟಗಳನ್ನು ಪ್ರಕಟಿಸುವ ಯೋಜನೆಗಳನ್ನು ಸಂಸ್ಥೆಗಳು ನಿರ್ಧರಿಸುತ್ತವೆ. ಕನ್ನಡ ಸಂಶೋಧನ ಸಂಸ್ಥೆ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಸೂಚಿ ಸಂಪುಟಗಳೇ ಇದಕ್ಕೆ ಸಾಕ್ಷಿ ಮತ್ತು 100ಕಟ್ಟುಗಳಲ್ಲಿ ಕನ್ನಡದ ಹಸ್ತಪ್ರತಿಗಳು ಸಂಸ್ಕೃತ ಇತ್ಯಾದಿ ಭಾಷೆಗಳ ಗ್ರಂಥಗಳೂ ಇರಬಹುದು. ಸಂಸ್ಕೃತ-ಕನ್ನಡ ಗ್ರಂಥಗಳ ವಿವರಗಳನ್ನು ಸಂಸ್ಥೆಗಳು ಪ್ರತ್ಯೇಕವಾಗಿ ಪ್ರಕಟಿಸುತ್ತಿವೆ. ಹೀಗಾಗಿ 100 ಕಟ್ಟುಗಳ ಸೂಚನೆ ಸಮರ್ಪಕವಿಲ್ಲ. ಇನ್ನು ಅನುಬಂಧವಾಗಿ ವಿಷಯ ಸೂಚಿ, ಲೇಖನಸೂಚಿ, ಶೀರ್ಷಿಕೆಸೂಚಿ, ಕೊಡಬೇಕೆಂಬ ಸಲಹೆ ಮಾನ್ಯವಾದುದು. ಇದನ್ನು ಕನ್ನಡ ಸಂಶೋಧನ ಸಂಸ್ಥೆ ಮತ್ತು ಹಂಪಿ ವಿಶ್ವವಿದ್ಯಾಲಯಗಳ ಸೂಚಿಗಳಲ್ಲಿ ಪಾಲಿಸಿರುವುದನ್ನು ಗಮನಿಸಬಹುದು.

ಇನ್ನು ಎರಡನೇ ಸಲಹೆ ಎಂದರೆ; "ಹತ್ತು ವಿವರಣಾತ್ಮಕ ಸೂಚಿ ಸಂಪುಟಗಳಿಗೆ ಒಂದು ಸಂಯುಕ್ತ ಸೂಚಿ ಸಂಪುಟ ರೂಪಿಸಬೇಕು ಇದು ಶೀರ್ಷಿಕೆ ಸೂಚಿ, ವಿಷಯ ಸೂಚಿ, ಲೇಖಕ ಸೂಚಿಗಳನ್ನೊಳಗೊಂಡ ಸಂಯುಕ್ತ ಸಂಪುಟವಾಗಿರಬೇಕು" ಇದನ್ನು 'ಮಹಾದರ್ಶಕಸೂಚಿ' ಎಂದು ಕರೆಯಬಹುದಾಗಿದೆ. ಕಾಲಕಾಲಕ್ಕೆ ಈ ಮಾಲೆಯನ್ನು ಸಂಪುಟ-1.2 ಹೀಗೆ ಬೆಳೆಯುತ್ತಾ ಹೋಗಬಹುದು."[17]

ಈ ಸೂಚನೆಯಲ್ಲಿ ಹತ್ತು ವಿವರಣಾತ್ಮಕ ಸಂಪುಟಗಳಿಗೆ ಒಂದು ಸಂಯುಕ್ತ ಸೂಚಿಯಾಗಿ ಎಂಬ ಮಾತು ಸಮಂಜಸವಿಲ್ಲ ಅದರ ಬದಲಿಗೆ 1000 ಅಧಿಕ 2000

ಗ್ರಂಥಗಳಿಗೆ, ಅಥವಾ 500 ಗ್ರಂಥಗಳ ಒಂದು ಸಂಪುಟ ಎಂಬುದಾಗಿ ಪ್ರಕಟಿಸುವುದು ಸೂಕ್ತ ಇಲ್ಲಿ ಗ್ರಂಥ ಸಂಖ್ಯೆಯನ್ನು ಗೊತ್ತುಮಾಡುವುದು ಸರಿ, ಸಂಪುಟಗಳ ಸಂಖ್ಯೆ ಅಲ್ಲ ಏಕೆಂದರೆ ಒಂದೊಂದು ಸಂಪುಟದಲ್ಲಿ ವಿವರಿಸಲಾದ ಗ್ರಂಥಗಳ ಸಂಖ್ಯೆ ಭಿನ್ನ ಭಿನ್ನವಾಗಿರುತ್ತದೆ. ಈ ಕೆಲಸ ಹತ್ತಾರು ಸಂಪುಟಗಳನ್ನು ಪ್ರಕಟಿಸುವ ಸಂಸ್ಥೆಗಳು ಮಾಡುವ ಕೆಲಸ; ಎಲ್ಲ ಸಂಸ್ಥೆಗಳಿಗೂ ಅಗತ್ಯವಿರುವುದಿಲ್ಲ ಏಕೆಂದರೆ ಅಲ್ಲಿಯ ಹಸ್ತಪ್ರತಿ ಸಂಗ್ರಹಗಳು ಸಾಕಷ್ಟು ಸಂಖ್ಯೆಯಲ್ಲಿರುವುದಿಲ್ಲ. "ಎಲ್ಲಿ ಹಸ್ತಪ್ರತಿಗಳ ಮಾಹಿತಿ ಒಂದೇ ಕಡೆಗೆ ಲಭ್ಯವಾಗುವಂತೆ ಹಸ್ತಪ್ರತಿ ಸೂಚಿಗಳು ಸಿದ್ಧಗೊಳ್ಳುತ್ತಿವೆ ಎಂದು ಹಂಪಿ ವಿಶ್ವವಿದ್ಯಾಲಯದ ಹಸ್ತಪ್ರತಿ ಶಾಸ್ತ್ರದ ವಿಭಾಗ ಮುಖ್ಯಸ್ಥರಾಗಿರುವ ಡಾ.ಎಫ್.ಟಿ.ಹಳ್ಳಿಕೇರಿ. ತಿಳಿಸಿದ್ದಾರೆ"[18]. ಇಲ್ಲಿಯವರೆಗೆ ಪ್ರಕಟವಾದ ಕನ್ನಡ ಹಸ್ತಪ್ರತಿಗಳ ಸೂಚಿ ಸಂಪುಟಗಳ ಸಂಖ್ಯೆ ನೂರನ್ನು ಮೀರಿದೆ. 1828ರಲ್ಲಿ ಪ್ರಕಟವಾದ ಎಚ್.ಎಚ್.ವಿಲ್ಸನ್ನರ ಸಂಪಾದಕತ್ವದಲ್ಲಿ ಪ್ರಕಟಿಸಿದ ಮೆಕೆಂಜಿ ಸಂಗ್ರಹವಾದ ಎ.ಡಿಸ್ಕ್ರಿಪ್ಟೀವ್ ಕ್ಯಾಟಲಾಗ್ ಆಫ್‌ದಿ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ (ಸಂ–1) ಎಂಬುದೇ ಹಸ್ತಪ್ರತಿ ಸೂಚಿಯ ಮೊದಲ ಕೃತಿ. ಇದರಲ್ಲಿ ಹಲವಾರು ಕನ್ನಡ ಕೃತಿಗಳ ವಿವರಗಳಿವೆ.

1928ರ ನಂತರ, ಮೊದಲ ಹಸ್ತಪ್ರತಿ ಸೂಚಿ ಪ್ರಕಟನೆ ಆದ ಮೇಲೆ ಮದ್ರಾಸ್, ಹೈದರಾಬಾದ್, ಮೈಸೂರು, ಧಾರವಾಡ, ಬೆಂಗಳೂರು, ಹಂಪಿ ಮೊದಲಾದ ಭಾಗಗಳ ವಿಶ್ವವಿದ್ಯಾಲಯ, ಪ್ರಾಚ್ಯವಿದ್ಯಾಕೇಂದ್ರ, ಸಾರ್ವಜನಿಕ ಸೇವಾಸಂಸ್ಥೆ ಧಾರ್ಮಿಕ ಕೇಂದ್ರಗಳು ಸಂಗ್ರಹಿಸಿದ ಹಸ್ತಪ್ರತಿಗಳ ಸೂಚಿ ಸಂಪುಟಗಳನ್ನು ನಿರಂತರವಾಗಿ ಪ್ರಕಟಿಸುತ್ತಿವೆ. ಈ ಬಗ್ಗೆ ಎಂ.ಎಂ.ಕಲಬುರ್ಗಿ ಮತ್ತು ಎಸ್.ಶಿವಣ್ಣ ಅವರು ಕನ್ನಡ ಹಸ್ತಪ್ರತಿ ಸೂಚಿಗಳ ಪಟ್ಟಿಯನ್ನು ಪ್ರಕಟಿಸಿದ್ದಾರೆ. ಕಲಬುರ್ಗಿ ಅವರು ಸ್ಥಳಾನುಸಾರವಾಗಿ "1.ಮದ್ರಾಸ್ ಹಸ್ತಪ್ರತಿ ಸೂಚಿಗಳು 2.ಮೈಸೂರು ಹಸ್ತಪ್ರತಿಸೂಚಿಗಳು 3.ಧಾರವಾಡ ಹಸ್ತಪ್ರತಿ ಸೂಚಿಗಳು 4.ಬೆಂಗಳೂರು ಮತ್ತು ಹೈದ್ರಾಬಾದ್ ಹಸ್ತಪ್ರತಿ ಸೂಚಿಗಳು 5.ಇತರ ಸೂಚಿಗಳು 6 ಲೇಖನರೂಪದ ಸೂಚಿಗಳು ವರ್ಗೀಕರಿಸಿ ಪ್ರಕಟಿಸಿದ್ದಾರೆ[19]. ಆದರೆ ಶಿವಣ್ಣನವರು (ಅ) ಹಸ್ತಪ್ರತಿ ಸೂಚಿಗಳು (ಆ) ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳು ಎಂದು ವರ್ಗೀಕರಿಸಿದ್ದು ಆ ರೀತಿ ಕೊಟ್ಟಿದ್ದಾರೆ20. ಕಲಬುರ್ಗಿ ಅವರು ಕಾಲಂವಾರು ಪಟ್ಟಿರೂಪದಲ್ಲಿ ಸೂಚಿ ಕೊಟ್ಟಿದ್ದಾರೆ. ಶಿವಣ್ಣನವರು ಟಿಪ್ಪಣಿಯ ರೂಪದಲ್ಲಿ ಕೊಟ್ಟಿದ್ದಾರೆ. ಟಿಪ್ಪಣಿಗಳಲ್ಲಿ ಕಲಬುರ್ಗಿ ಅವರ ಪಟ್ಟಿಯಲ್ಲಿ ಇಲ್ಲದ ಕೆಲವು ಸೂಚಿ ವಿವರಗಳು ಕಲಬುರ್ಗಿ ಅವರ ಪಟ್ಟಿಯಲ್ಲಿವೆ. ಈ ಇಬ್ಬರ ಪಟ್ಟಿಯನ್ನು ಸಮನ್ವಯಗೊಳಿಸಿ ಇಲ್ಲಿ ಪಟ್ಟಿಮಾಡಿದೆ.

1. ದಿ ಮೆಕೆಂಜಿ ಕಲೆಕ್ಷನ್: ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ದಿ ಓರಿಯಂಟಲ್

ಮ್ಯಾನುಸ್ಕ್ರಿಪ್ಟ್ಸ್ ಸಂ.ಎಚ್.ಎಚ್.ವಿಲ್ಸನ್ ಸಂ.1 ಇಸವಿ 1828 ಈ ಸೂಚಿ ನನ್ನ ಅವಲೋಕನಕ್ಕೆ ಸಿಕ್ಕಿಲ್ಲ. ಇದರಲ್ಲಿ ಕನ್ನಡಕ್ಕೆ ಸಂಬಂಧಿಸಿದ 152 ಕೃತಿಗಳ ವಿವರವಿದೆಯೆಂದು ಶ್ರೀ ಎಚ್.ದೇವೀರಪ್ಪನವರು 'ಕನ್ನಡ ಹಸ್ತಪ್ರತಿಗಳ ಇತಿಹಾಸ' ಪು.100ರಲ್ಲಿ (ಬೆಂಗಳೂರು.1977 ತಿಳಿಸಿದ್ದಾರೆ. ಮೆಕೆಂಜಿ ಸಂಗ್ರಹಿಸಿದ್ದ ಕೈಫಿಯತ್ತುಗಳು ಹಾಗೂ ಶಾಸನದ ಪಡಿಯಚ್ಚುಗಳ ಸೂಚಿಯೊಂದು 1952ರಲ್ಲಿ ಪ್ರಕಟವಾಗಿದೆ. ಇದನ್ನು ಮುಂದೆ ಪ್ರಸ್ತಾಪಿಸಲಾಗುವುದು.

2. ಅಲ್ಫಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮ್ಯಾನುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ್, ಸಂಸ್ಕೃತ, ತೆಲುಗು, ತಮಿಳು, ಕೆನರೀಸ್, ಮಲೆಯಾಳಂ, ಮರಾಠಿ, ಒರಿಯಾ ಅರೇಬಿಕ್, ಪರ್ಶಿಯನ್, ಮತ್ತು ಹಿಂದೂಸ್ತಾನಿ. 1893 ಕನ್ನಡಕ್ಕೆ ಸಂಬಂಧಿಸಿದಂತೆ ಇದರಲ್ಲಿನ ಪುಟಗಳಲ್ಲಿ ಶಿರೋನಾಮೆ ಸೂಚೀ ವಿಷಯಸೂಚೀ ಕೈಫಿಯತ್ತು ಇತ್ಯಾದಿ ಸೂಚೀ ಎಂಬ 3 ಪ್ರಕಾರಗಳಿವೆ.

3. ಎ ಕ್ಲಾಸಿಫೈಡ್ ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನುಸ್ಕ್ರಿಫ್ಟ್ ಇನ್ ದಿ ಸರಸ್ವತೀ ಭಂಡಾರಮ್ (ಪ್ಯಾಲೇಸ್ ಸಂಸ್ಕೃತ ಲೈಬ್ರರಿ) ಆಫ್ ಎಚ್.ಎಚ್. ಮಹಾರಾಜ ಆಫ್ ಮೈಸೂರು ಕಲೆಕ್ಸನ್ ಆಫ್ 1900–1905 ಇದರಲ್ಲಿ ಸುಮಾರು 300 ಓಲೆ ಕೃತಿಗಳ ವಿವರವಿದೆ. ಇದೇ ಸಂಸ್ಥೆಗೆ ಸೇರಿದ ಮತ್ತೊಂದು ಸೂಚಿ 1943 ರಲ್ಲಿ ಪ್ರಕಟವಾಗಿದ್ದು ಮುಂದೆ ಪ್ರಸ್ತಾಪಿಸಿದೆ.

4. ಎ ಕ್ಯಾಟಲಾಗ್ ಆಫ್ ಸಂಸ್ಕೃತ ಪ್ರಾಕೃತ ಆ್ಯಂಡ್ ಹಿಂದಿ ವರ್ಕ್ಸ್ ಇನ್ ದಿ ಜೈನ ಸಿದ್ಧಾಂತ ಭವನ ಅರಾ. 1919ರಲ್ಲಿ ಶ್ರೀ ಸುಪಾರ್ಶ್ವದಾಸ್‌ಗುಪ್ತ ಮತ್ತು ಮೂಲ ಚಂದ್ರ ಜೈನ್ ಅವರಿಂದ ಸಂಪಾದಿತವಾಗಿ ದೇವನಾಗರಿ ಲಿಪಿಯಲ್ಲಿ ಪ್ರಕಟವಾಗಿದೆ. ಇಲ್ಲಿ ಸುಮಾರು 500 ಕೃತಿಗಳಿವೆ.

5. ಮೈಸೂರು ಗೌರ್ನಮೆಂಟ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು ಕೈಬರಹದ ಕರ್ಣಾಟಕ ಪುಸ್ತಕಗಳ ಪಟ್ಟಿ 1921 ಇದರಲ್ಲಿ ಮುದ್ರಿತ ಕೃತಿಗಳ ವಿವರದೊಡನೆ ಕೈಬರಹದ 1511 ಕೃತಿಗಳನ್ನು ಹೆಸರಿಸಿದೆ.

6. ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಮ್ಯಾನುಸ್ಕ್ರಿಪ್ಟ್ಸ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಸ್ ಆ್ಯಂಡ್ ಬೆರಾರ 1976 ರಾವಬಹದ್ದೂರ ಹೀರಾಲಾಲರ ಸಂಪಾದಕತ್ವದಲ್ಲಿ

ಸಂಪಾದಿಸಲಾಗಿದೆ ಇಲ್ಲಿ 43 ಕೃತಿಗಳ ಉಲ್ಲೇಖವಿದೆ.

7. i) ಸ್ವಾದಿಯ ಜೈನಮಠದೊಳಗಿರುವ ಕನ್ನಡ ಗ್ರಂಥಗಳು(ಪು.169)

ii) ಧರಣೇಂದ್ರಪ್ಪಾ ಅಣ್ಣಾ ಆಲೂರ.ಸಿರ್ಸಿ. ಇವರಲ್ಲಿನ ತಾಡಪತ್ರ ಗ್ರಂಥಗಳು (ಪು.169)

iii) ಇಸ್ಲೂರ ಮಠದಲ್ಲಿರುವ ವೀರಶೈವ ಗ್ರಂಥಗಳು (ಪು.170)

ಇವನ್ನು ಶ್ರೀ.ಕೆ.ಜಿ.ಕುಂದಣಗಾರರು ಸಿದ್ಧಪಡಿಸಿದ್ದರು. ಜಯಕರ್ನಾಟಕ 7.3.1929 ಪು169–70ರಲ್ಲಿ ಪ್ರಕಟಿಸಿದ್ದಾರೆ. ಸ್ವಾದಿಯ ಮಠದಲ್ಲಿನ 28 ಕೃತಿಗಳ ಕೃತಿ ಹಾಗೂ ಕರ್ತೃಗಳನ್ನು ಸೂಚಿಸಿದೆ. ಅಲ್ಲದೆ ಕೆಲವು ಕೃತಿಗಳ ಇತರ ಪ್ರತಿಗಳನ್ನು ತಿಳಿಸಿದೆ. ಈ ರೀತಿಯಲ್ಲಿರುವ ಪ್ರತ್ಯಂತರಗಳ ಸಂಖ್ಯೆ 17 ಆಲೂರ ಸಂಗ್ರಹದಲ್ಲಿನ 8+2 ಕೃತಿಗಳನ್ನು ಕೊಟ್ಟಿದೆ. ಇಸ್ಲೂರ ಮಠದಲ್ಲಿನ 27 ಕೃತಿಗಳನ್ನು ಸೂಚಿಸಿದ್ದು ಅಚ್ಚಾದ ಕೃತಿಗಳನ್ನು ದಪ್ಪ ಅಕ್ಷರದ ಮೊಳೆಗಳಿಂದ ಸೂಚಿಸಿದೆ.

8. ಆ್ಯನ್ ಅಲ್ಫಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್‌ದಿ ಗವರ್ನ್‌ಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ ಮದ್ರಾಸ್ ಎಸ್.ಕುಮಾರಸ್ವಾಮಿ ಶಾಸ್ತ್ರಿಯವರು ಸಂಪಾದಿಸಿದ್ದಾರೆ. 1929ರಲ್ಲಿ ಇದರಲ್ಲಿ 1540 ಕೃತಿಗಳ ವಿವರಗಳಿವೆ.

9.ಆ್ಯನ್ ಅಲ್ಫಬೆಟಿಕಲ್ ಇಂಡೆಕ್ಸ್ ಆಫ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್‌ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ ಮದ್ರಾಸ್ ಸಂ.ಟಿ.ಚಂದ್ರಶೇಖರನ್ 1952. ಕೈಫಿಯತ್ತು ಹಾಗೂ ಶಾಸನ ಪಡಿಯಚ್ಚುಗಳ ಸೂಚಿ 1805ಕ್ಕೂ ಮಿಕ್ಕಿನ ಉಲ್ಲೇಖಗಳಿವೆ.

10. ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ಕನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್‌ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಫ್ಟ್ಸ್ ಲೈಬ್ರರಿ ಮದ್ರಾಸ್ ಸಂ.1.2.3.4.5.06.7 ಹೀಗೆ 7 ಸಂಪುಟಗಳಿವೆ. ಇವುಗಳನ್ನು ಕುಪ್ಪುಸ್ವಾಮಿ ಶಾಸ್ತ್ರಿ ಮತ್ತು ಪಿ.ಪಿ.ಎಸ್.ಶಾಸ್ತ್ರಿ ಎ.ಶಂಕರನ್ ಟಿ.ಚಂದ್ರಶೇಖರನ್‌ರವರು ಸಂಪಾದಿಸಿದ್ದಾರೆ 1934ರಿಂದ 1958ರವರೆಗೆ.

11. ಮೈಸೂರು ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು ಕೈಬರಹದ ಕನ್ನಡ ಪುಸ್ತಕಗಳ ಪಟ್ಟಿ 1930 ಇದರಲ್ಲಿ 164 ಕನ್ನಡ ಕೃತಿಗಳಿವೆ.

12. ಮೈಸೂರು ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು

ಕೈಬರಹದ ಪುಸ್ತಕಗಳ ಪಟ್ಟಿ.

13. ಮೈಸೂರು ಗವರ್ನಮೆಂಟ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ದಲ್ಲಿ 1941ರಿಂದ 1954ರವರೆಗೆ ಸಂಗ್ರಹಿಸಿದ ಕೈಬರಹದ ಪುಸ್ತಕಗಳ ಪಟ್ಟಿ 1955.

14. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿರುವ ಕೈಬರಹದ ಕನ್ನಡ ಗ್ರಂಥಗಳ ಆಕಾರಾದಿ ಸೂಚೀ 1955 ಇದರಲ್ಲಿ 1827 ಕೃತಿಗಳ ವಿವರಗಳಿವೆ.

15. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ ಬಿ.ಎಸ್.ಸಣ್ಣಯ್ಯನವರ ಸಂಪಾದಕತ್ವದಲ್ಲಿ ನಾಲ್ಕು ಸಂಪುಟಗಳು ಪ್ರಕಟವಾಗಿವೆ. 1962ರಿಂದ 1963ರವರೆಗೆ.

16. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ 5ರಿಂದ9ರವರೆಗೆ 1980–1988 ಪ್ರಕಟವಾಗಿವೆ. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲ್ಮ್ ಸೂಚಿ 1988ರಲ್ಲಿ ಪ್ರಕಟವಾಗಿದೆ.

17. ಕೈಬರಹದ ಗ್ರಂಥಗಳ ಶೋಧನೆಯು ಶಿವಾನುಭವ 7.1(ಪು.52–62)1932 ಡಾ.ಎಸ್.ಸಿ.ನಂದೀಮಠರು "ಧಾರವಾಡದ ಲಿಂಗಾಯತ ವಿದ್ಯಾವರ್ಧಕ ಸಂಘಕ್ಕೆ ಸಂಬಂಧಿಸಿದ ವಾಙ್ಮಯ ಸಂಘದ ಅಧಿಪತಿಗಳಿಗೆ ಕಳುಹಿಸಿದ ವರದಿಯ ಸಾರಾಂಶ"ವಾಗಿದೆ ಸಂಸ್ಕೃತ ಹಾಗೂ ಕನ್ನಡ ಕೃತಿಗಳ ಬಗೆಗೆ ಪ್ರಸ್ತಾಪಿಸಲಾಗಿದ್ದು 215 ಕನ್ನಡ ಕೃತಿಗಳನ್ನು ಹೆಸರಿಸಿದೆ.

18. ಪ್ರಾಚೀನ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ ಕನ್ನಡ ಸಂಶೋಧನ ಸಂಸ್ಥೆ ಧಾರವಾಡ ಮೇಲಿನ ಹೆಸರಿನಿಂದ ಕನ್ನಡ ಸಂಶೋಧನ ಸಂಸ್ಥೆಯ ಮೂಲಕ 1953ರಿಂದ 1990ರವರೆಗೆ 13 ಸಂಪುಟಗಳಲ್ಲಿ ವಿವರಣಾತ್ಮಕ ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸಿದ್ದಾರೆ.

19. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಕ.ವಿ.ವಿ.ಧಾರವಾಡ ಇವರು 1992ರಲ್ಲಿ 6 ಸಂಪುಟಗಳನ್ನು ಪ್ರಕಟಿಸಿದ್ದಾರೆ ಇನ್ನೂ ನಾಲ್ಕು ಸಂಪುಟಗಳು ಪ್ರಕಟವಾಗಿಲ್ಲ ಅಥವಾ ಲಭ್ಯವಿಲ್ಲ.

20. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಉಸ್ಮಾನಿಯ ವಿಶ್ವವಿದ್ಯಾಲಯ ಹೈದ್ರಾಬಾದ ಶ್ರೀ ಬಿ.ರಾಮಚಂದ್ರರಾವ್ ಮತ್ತು ಶ್ರೀ.ವಿ.ವೆಂಕಟಾಚಲ ಶಾಸ್ತ್ರಿಗಳಿಂದ ಸಂಪಾದಿತವಾದ ಈ ಸೂಚಿ 1966ರಲ್ಲಿ ಪ್ರಕಟವಾಗಿದೆ. ಇಲ್ಲಿನ ಹಸ್ತಪ್ರತಿಗಳಲ್ಲಿ ಬಹುಪಾಲು ಸವಣೂರ ನವಾಬರಿಗೆ ಸಂಬಂಧಿಸಿದುವು. ಸೂಚಿಯಲ್ಲಿ 295 ಜಾತಿ ಹಾಗೂ ಕಾಗದದ ಪ್ರತಿಗಳಿವೆ ಇದರಲ್ಲಿ ಕೆಲವು ಸಂಸ್ಕೃತ ಕೃತಿಗಳೂ ಸೇರ್ಪಡೆಯಾಗಿದೆ.

21. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ.1 ಬೆಂಗಳೂರು ಕನ್ನಡ ಅಧ್ಯಯನ ಕೇಂದ್ರವು ಎಸ್.ಶಿವಣ್ಣನವರ ಸಂಪಾದಕತ್ವದಲ್ಲಿ ಸಂಪಾದಿಸಿ ಪ್ರಕಟಿಸಿದೆ–1982ರಲ್ಲಿ

22. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟವನ್ನು ಬಿ.ಎಂ.ಶ್ರೀ ಪ್ರತಿಷ್ಠಾನವು ಕೆಳದಿ ಗುಂಡಾಜೋಯಿಸ್ ಮತ್ತು ನಾ.ಗೀತಾಚಾರ್ಯ ಇವರ ಸಂಪಾದಕತ್ವದಲ್ಲಿ ಸಂಪಾದಿಸಿ ಪ್ರಕಟಿಸಿದೆ–1987.

23. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ ಕೆ.ಭುಜಬಲಿ ಶಾಸ್ತ್ರಿ–1948

24. ಶ್ರವಣಬೆಳಗೊಳ ಶ್ರೀಜೈನಮಠದ ತಾಡಪತ್ರೀಯ ಗ್ರಂಥಸೂಚಿ ಶ್ರೀದೇವಕುಮಾರ ಶಾಸ್ತ್ರಿಗಳಿಂದ ಸಂಪಾದಿತವಾಗಿ 1980ರಲ್ಲಿ ಅಚ್ಚಾಗಿದೆ. ಶಾಸ್ತ್ರಿಗಳು ಈ ಸೂಚಿಯನ್ನು ಕೆ.ಭುಜಬಲಿ ಶಾಸ್ತ್ರಿಗಳ ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥ ಸೂಚಿ ಮಾದರಿಯಲ್ಲಿ ಸಿದ್ಧಪಡಿಸಿದ್ದಾರೆ. ಇದರಲ್ಲಿ 448 ಓಲೆ ಹಾಗೂ 19 ಕಾಗದ ಕಟ್ಟುಗಳ ವಿವರವಿದೆ. ಈ ಸೂಚಿಯಲ್ಲಿ ಕೆಲವು ಕನ್ನಡ ಲಿಪಿಯಲ್ಲಿನ ಸಂಸ್ಕೃತ ಪ್ರಾಕೃತ ಕೃತಿಗಳು ಹಾಗೂ ತಮಿಳು ಲಿಪಿಯ ತಮಿಳು ಕೃತಿಗಳು ಉಲ್ಲೇಖಗೊಂಡಿವೆ.

25. ದೇವನಾಗರಿ ಪ್ರಿಂಟೆಡ್ ಕ್ಯಾಟಲಾಗ್ ಆಫ್ ದಿ ಮ್ಯಾನುಸ್ಕ್ರಿಪ್ಟ್ಸ್ ಇನ್ ದಿ ಮಠ ಆಫ್ ಶ್ರೀಲಕ್ಷ್ಮೀಸೇನ ಭಟ್ಟಾರರ ಮಹಾಸ್ವಾಮಿನ್ ಕೊಲ್ಹಾಪೂರ 1900 44 ಪುಟಗಳಲ್ಲಿ ಮುದ್ರಿತವಾದ ಈ ಸೂಚಿಯನ್ನು ನಾನು ನೋಡಿಲ್ಲ 1978ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ 'ಕನ್ನಡ ಅಧ್ಯಯನ ಪೀಠ'ದ ಕೆಲವರು ಡಾ॥ ಎಂ.ಎಂ.ಕಲಬುರ್ಗಿಯವರೊಡನೆ ಹೋಗಿ ಈ ಭಂಡಾರದಲ್ಲಿನ ಕನ್ನಡ ಕೃತಿಗಳನ್ನು ಸಮಗ್ರವಾಗಿ ಪರಿಶೀಲಿಸಿದ್ದಾರೆ. ಅವರಂತೆ ಇಲ್ಲಿ 646 ಕಟ್ಟುಗಳಿವೆ. ಇವುಗಳಲ್ಲಿ ತಾಳೆಗರಿ 357, ಕಾಗದ 289.

26. ಕೊಲ್ಲಾಪೂರ ಶ್ರೀಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿ ಸೂಚಿ ಸಂ.ಎಂ.ಎಂ.ಕಲಬುರ್ಗಿ, ಬಿ.ಆರ್. ಹಿರೇಮಠ ಎಸ್.ವಿ.ಅಯ್ಯನಗೌಡರ 1988.

27. ಗದುಗಿನ ತೋಂಟದಾರ್ಯ ಮಠದ ಹಸ್ತಪ್ರತಿಸೂಚಿ. ಸಂ.ಎಸ್.ಶಿವಣ್ಣ 1985.

28. ವೀರಶೈವ ಅಪ್ರಕಟಿತ ಗ್ರಂಥಸೂಚಿ ಸಂ.ಎಸ್.ಶಿವಣ್ಣ 1982.

29. ದಿ ಲಾಸ್ಟ್ ಆಫ್‌ದಿ ಅನ್‌ಪ್ರಿಂಟೆಡ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಸುಸ್ಕ್ರಿಪ್ಟ್ಸ್ ಇನ್ ದಿ ಪ್ಯಾಲೇಸ್ ಸರಸ್ವತಿ ಭಂಡಾರ (ಮಹಾರಾಜ ಸಂಸ್ಕೃತ ಕಾಲೇಜ್ ಮೈಸೂರು) 1943.

30. ಎ ಕ್ಯಾಟಲಾಗ್ ಆಫ್ ಸಂಸ್ಕೃತ ಪ್ರಾಕೃತ ಆ್ಯಂಡ್ ಹಿಂದಿ ವರ್ಕ್ಸ್ ಇನ್ ದಿ ಜೈನ ಸಿದ್ಧಾಂತ ಭವನ ಆರಾ. ಸಂ.ಸುಪಾರ್ಶ್ವದಾಸ್ ಗುಪ್ತ ಮೂಲಚಂದ್ರ ಜೈನ-1919.

31. ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಪ್ರಾಕೃತ ಮ್ಯಾನ್ಸುಸ್ಕ್ರಿಪ್ಟ್ಸ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಸ್ ಆ್ಯಂಡ್ ಬೆರಾರ್ ಸಂ.ರಾವಬಹದ್ದೂರ ಹೀರಾಲಾಲ-1926.

32. ದಿ ಅನ್‌ನೋನ್ ಪೇಜಸ್ ಇನ್ ದಿ ಹಿಸ್ಟರಿ ಆಫ್ ಕನ್ನಡ ಲಿಟರೇಚರ್ ಸಂ.ಸಿ.ಮಹಾದೇವಪ್ಪ.

33. ಶ್ರೀ ಜಗದ್ಗುರು ಮೂರುಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿಸೂಚಿ ಸಂ.ಕೆಳದಿ ಗುಂಡಾಜೋಯಿಸ್-1989.

34. ಶ್ರೀಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ. ಸಂ.ಎಸ್.ಶಿವಣ್ಣ-1991.

35. ಕೆಳದಿ ಸಂಗ್ರಹಾಲಯ ಮತ್ತು ಐತಿಹಾಸಿಕ ಸಂಶೋಧನ ಕೇಂದ್ರ ವರ್ಣನಾತ್ಮಕ ಹಸ್ತಪ್ರತಿಗಳ ಸೂಚಿ. ಸಂ.ಎಸ್.ಆರ್.ರಾವ್.ಕೆಳದಿ ಗುಂಡಾಜೋಯಿಸ್.

36. ಕಂಚಗಲ್–ಬಿದಿರೆ ದೊಡ್ಡಮಠದಲ್ಲಿ ದೊರೆತ ತಾಡವೋಲೆ ಗ್ರಂಥಗಳು ಈ ಸೂಚಿಯನ್ನು ಸಿದ್ಧಪಡಿಸಿದವರು ಶ್ರೀ.ಜಿ.ಎಂ.ಉಮಾಪತಿ ಶಾಸ್ತ್ರಿಗಳು ಸುಕುಮಾರ ಪತ್ರಿಕೆಯ ಸಂಪುಟ 4–3–1953 ಹಾಗೂ 4–9–1954ರಲ್ಲಿ ಪ್ರಕಟವಾಗಿದೆ.

37. ಗದಗದ ತೋಂಟದಾರ್ಯ ಮಠದ ತಾಡವೋಲೆ ಶ್ರೀ.ಜಿ.ಎಂ. ಉಮಾಪತಿ ಶಾಸ್ತ್ರಿಗಳು ಸಿದ್ಧಪಡಿಸಿದ್ದು 'ಸುಕುಮಾರ' 1954ರಲ್ಲಿ ಪ್ರಕಟಿಸಿದೆ.

38. ಹಾವೇರಿ ಹುಕ್ಕೇರಿ ಮಠದ ಓಲೆ ಸಂಗ್ರಹ ಶ್ರೀ.ಜಿ.ಎಂ.ಉಮಾಪತಿ ಶಾಸ್ತ್ರಿಗಳು ಸಂಗ್ರಹಿಸಿದ್ದು 'ಸುಕುಮಾರ' 5–5–1955ರಲ್ಲಿ ಪ್ರಕಟವಾಗಿದೆ.

39. ಹಾರ್ನಹಳ್ಳಿ ಕೋಡಿಮಠದ ಓಲೆಗಳು ಶ್ರೀ.ಜಿ.ಎಂ.ಉಮಾಪತಿಶಾಸ್ತ್ರಿಗಳು ಸಿದ್ಧಗೊಳಿಸಿದ್ದು 'ಸುಕುಮಾರ' 5–8–9–1955ರಲ್ಲಿ ಪ್ರಕಟವಾಗಿದೆ.

40. ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯಲ್ಲಿರುವ ಕೈಬರಹದ 107 ಕನ್ನಡ ಗ್ರಂಥಗಳ ಅಕಾರಾದಿ ಸೂಚೀ (1819ರಿಂದ 1951ರವರೆಗೆ) 1955 ಇದರಲ್ಲಿ 1827 ಕೃತಿಗಳ ವಿವರಗಳಿವೆ.

41. ಮದರಾಸು–ಅಡಿಯಾರ್ ಪುಸ್ತಕಾಲಯದಲ್ಲಿರುವ ಕನ್ನಡ ಗ್ರಂಥಗಳು 'ಶರಣ ಸಾಹಿತ್ಯ' 20–6–1957. ಇದರಲ್ಲಿ 56 ಕೃತಿಗಳ ನಾಮೋಲ್ಲೇಖವಿದೆ.

42. 'ಶರಣ ಸಾಹಿತ್ಯ' ಕಾರ್ಯಾಲಯದಲ್ಲಿರುವ ತಾಳೆಯೋಲೆ ಹಾಗೂ ಕಾಗದ ಪ್ರತಿಗಳು 'ಶರಣ ಸಾಹಿತ್ಯ' 21–5–1958.

43. ಪ್ರೊ॥ ಸಿ.ಮಹಾದೇವಪ್ಪನವರು 1960ರಲ್ಲಿ ದಿ ಅನೋನ್ ಪೇಜಸ್ ಇನ್ ದಿ ಹಿಸ್ಟರಿ ಆಫ್ ಕನ್ನಡ ಲಿಟರೇಚರ್ 1 ಎಂಬ ಹೆಸರಿನಲ್ಲಿ ಪುಸ್ತಕವನ್ನು ಪ್ರಕಟಿಸಿದ್ದು ಅದರಲ್ಲಿ 13 ಕೃತಿಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ.

44. ಬಳ್ಳಾರಿ–ಹೊಸಪೇಟೆಯ ಶ್ರೀ.ಜಗದ್ಗುರು ಕೊಟ್ಟೂರಸ್ವಾಮಿ ಸಂಸ್ಥಾನ ಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ 'ಹೇಮಕೂಟ' ಮಾನಪತ್ರಿಕೆಯ 1–2–1975ರಲ್ಲಿನ ಪ್ರಕಟಿತ ಸೂಚಿಯನ್ನು ಶ್ರೀ.ಜಿ.ಎಂ.ಉಮಾಪತಿ ಶಾಸ್ತ್ರಿಗಳು

ಸಿದ್ದಗೊಳಿಸಿದ್ದಾರೆ. ಇದರ ಮುಂದುವರಿದ ಭಾಗವನ್ನು ಶ್ರೀ.ಎಸ್.ಎಸ್.ಹಿರೇಮಠ ಅವರು ಅಣಿಗೊಳಿಸಿದ್ದು 'ಹೇಮಕೂಟ'ದ 1-11-1976 ಮತ್ತು 1-4-1976ರಲ್ಲಿ ಪ್ರಕಟವಾಗಿದೆ. ಸೂಚಿಯಲ್ಲಿ 33ಕಟ್ಟುಗಳಲ್ಲಿನ 116ಕೃತಿಗಳ ವಿವರವಿದೆ.

45. ಶ್ರೀಬಾಹುಬಲಿ ಬ್ರಹ್ಮಚರ್ಯಾಶ್ರಮದಲ್ಲಿ ಮೈಕ್ರೋಫಿಲ್ಮ ಮಾಡಿರುವ ಗ್ರಂಥಗಳು ಕನ್ನಡ ಅಧ್ಯಯನ ಸಂಸ್ಥೆಯ ಸಂಗ್ರಹದಲ್ಲಿವೆ. ಇವುಗಳ ಯಾದಿಯನ್ನು ಶ್ರೀ.ಬಿ.ಎಸ್.ಸಣ್ಣಯ್ಯನವರು ಸಿದ್ಧಗೊಳಿಸಿದ್ದು 'ಸನ್ಮತಿ' ಮಾಸಪತ್ರಿಕೆ 22-1-1978ರಲ್ಲಿ ಪ್ರಕಟವಾಗಿದೆ. ಇದರಲ್ಲಿ 37 ಕೃತಿಗಳನ್ನು ಹೆಸರಿಸಿದೆ.

46. ಹೈದರಾಬಾದು ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ" 21-3(ಪು-183-92)1936 ಪ್ರೊ॥ ಡಿ.ಕೆ.ಭೀಮಸೇನ್‌ರಾವ್ ಅವರು ಸಿದ್ಧಗೊಳಿಸಿದ್ದು 20 ಕನ್ನಡ ಕೃತಿಗಳನ್ನು ಹೆಸರಿಸಿದೆ.

47. ಐನೂಲಿ ಗುಂಡಯ್ಯನ ಮನೆಯ ಸಂಗ್ರಹ.ಶ್ರೀಕಪಟರಾಳ್ ಕೃಷ್ಣರಾಯರು 83 ಕೃತಿಗಳ ಪಟ್ಟಿಯನ್ನು ಸಿದ್ಧಪಡಿಸಿದ್ದು ಅದು 'ಶರಣಸಾಹಿತ್ಯ'ಹ ಸಂಪುಟ4 ಸಂಚಿಕೆ 7.1941ವು 221ರಲ್ಲಿ ಅಚ್ಚಾಗಿವೆ.

48. ಇಂಗ್ಲೆಂಡಿನಲ್ಲಿರುವ ಕನ್ನಡ ಹಸ್ತಪ್ರತಿಗಳು ಸಂ.ಎಂ.ಎಂ.ಕಲಬುರ್ಗಿ. ಈ ಬಗ್ಗೆ ತಿಳಿಸಿದ್ದಾರೆ.

49. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ ಶ್ರಿ.ಕೆ.ಭುಜಬಲಿ ಶಾಸ್ತ್ರಿಗಳಿಂದ ಸಂಪಾದಿತವಾಗಿದ್ದು. ದೇವನಾಗರಿ ಲಿಪಿಯಲ್ಲಿ 1948ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಮೂಡಬಿದಿರೆ ಜೈನಮಠ, ಮೂಡಬಿದಿರೆ, ಜೈನಭವನ (ಪು.254-281) ಕಾರ್ಕಳದ ಜೈನಮಠ (ಪು.282-306) ಮತ್ತು ಅಲೆಯೂರ ಆದಿನಾಥ ದೇವಾಲಯದಲ್ಲಿನ ಸಂಗ್ರಹ (ಪು.307-312)ಗಳ ವಿವರಗಳಿವೆ. ಈ ಸೂಚಿ ಕನ್ನಡ ಕೃತಿಗಳ ಬಗೆಗೆ ತಿಳಿಸುವುದಲ್ಲದೆ. ಕನ್ನಡ ಲಿಪಿಯಲ್ಲಿ ರಚಿತವಾದ ಪ್ರಾಕೃತ, ಸಂಸ್ಕೃತ, ಕೃತಿಗಳ ವಿವರಗಳನ್ನು ಒಳಗೊಂಡಿದೆ.

## ವಿಶಿಷ್ಟ ಸಮಗ್ರ ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳು:

ಸಮಗ್ರ ಸೂಚಿಯಲ್ಲಿ ಅಕಾರಾದಿಯಾಗಿ ಎಲ್ಲ ಹಸ್ತಪ್ರತಿ ಸೂಚಿ ಕೊಡುವುದು ಒಂದು ಬಗೆಯಾದರೆ ನಿರ್ದಿಷ್ಟ ಉದ್ದೇಶಗಳಿಗಾಗಿ ಸಮಗ್ರಸೂಚಿ ಪ್ರಕಟನೆಯೂ ಅಗತ್ಯವಾಗಿರುತ್ತದೆ. ಹಸ್ತಪ್ರತಿ ಸೂಚಿಗಳನ್ನು "ಪ್ರಕಟನೆಗಾಗಿ, ಪ್ರಕಟನೆಯಲ್ಲಿ, ಪ್ರಯೋಜನಕ್ಕಾಗಿ ಪ್ರಕಟನೆ" ಎಂಬ ಗುರಿಯನ್ನು ಸಾಧಿಸಬೇಕಾದರೆ ನಿರ್ದಿಷ್ಟ ಗುರಿಯ ಗ್ರಂಥ ಸೂಚಿಗಳು ಪ್ರಕಟವಾಗಬೇಕು. ಇಂಥ ಒಂದು ಪ್ರಕಟನೆ ಎಂದರೆ ವೀರಶೈವ ಹಸ್ತಪ್ರತಿ ಪುಷ್ಪಿಕೆ ಎಂಬ ವರ್ಣನಾತ್ಮಕ ಹಸ್ತಪ್ರತಿಸೂಚಿ, ಎಸ್.ಶಿವಣ್ಣನವರಿಂದ ಸಂಪಾದಿತವಾದುದು. (1974ರಲ್ಲಿ ಒಂದು ಸಂಪುಟ ಪ್ರಕಟವಾಗಿದೆ. ಗದುಗಿನ ವೀರಶೈವ ಅಧ್ಯಯನ ಸಂಸ್ಥೆ ಪ್ರಕಟಿಸಿದೆ. ಇದರಲ್ಲಿ ವೀರಶೈವ ಹಸ್ತಪ್ರತಿ ಪುಷ್ಪಿಕೆಗಳನ್ನು (ಹಸ್ತಪ್ರತಿಯ ಆದಿ ಮತ್ತು ಅಂತ್ಯಭಾಗಗಳನ್ನು) ಮಾತ್ರ ಪ್ರಕಟಿಸಿದೆ. ವರ್ಣನಾತ್ಮಕ ಹಸ್ತಪ್ರತಿ ಸೂಚಿಯ ಅತಿಮುಖ್ಯ ಭಾಗ ಇದು ಎಂಬ ಕಾರಣಕ್ಕಾಗಿಯೇ ಏನೋ ಪುಷ್ಪಿಕೆಗಳನ್ನು ಮಾತ್ರ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ಉದಾಹರಣೆ. ಅಖಂಡೇಶ್ವರ ವಚನದ ಪುಷ್ಪಿಕೆಗಳು 21 ಹಸ್ತಪ್ರತಿಗಳಲ್ಲಿ ಇರುವುದು ಒಂದೆಡೆ ಇದೆ. ಇವುಗಳಿಂದ ಹಸ್ತಪ್ರತಿ ವಿವರಗಳು ಅಡಿ ಟಿಪ್ಪಣಿಯಲ್ಲಿದೆ. ಅನುಬಂಧದಲ್ಲಿ ಲೇಖನ ಅಕಾರಾದಿ ಇದೆ. ನಾಡಿನ ನಾನಾ ಭಾಗಗಳ ಹಸ್ತಪ್ರತಿಗಳ ವಿವರ ಇಲ್ಲಿ ಸಮಾವೇಶವಾಗಿದೆ. ಇದೇ ರೀತಿ ನಿರ್ದಿಷ್ಟ ವಿಷಯದ ಸೂಚಿಗಳು ಪ್ರಕಟವಾಗಬೇಕಾದ ಅಗತ್ಯವಿದೆ. ಧರ್ಮಸ್ಥಳದ ಶ್ರೀ ಮಂಜುನಾಥ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನವು ಹೊರತಂದಿರುವ ಯಕ್ಷಗಾನ ಹಸ್ತಪ್ರತಿಗಳ ವಿವರಣ ಸೂಚಿ–1993 ಮತ್ತು ತುಳುಲಿಪಿ ಹಸ್ತಪ್ರತಿಗಳ ಸೂಚಿ 1997 ಇವೆರಡೂ ಆಯಾ ವಿಷಯಗಳಿಗೆ ಸಂಬಂಧಿಸಿದ ಪ್ರಥಮವಾಗಿ ಹೊರಬಂದ ಸೂಚಿಗಳಾಗಿವೆ.

### ಹಸ್ತಪ್ರತಿಗಳ ವ್ಯವಸ್ಥೆ:

ಹಸ್ತಪ್ರತಿ ಸೂಚಿ ಸಿದ್ಧಪಡಿಸಲು ಪೂರ್ವಭಾವೀ ಸಿದ್ಧತೆಗಳ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ಕೆಲವು ಸಂಗತಿಗಳನ್ನು ತಿಳಿಸಿದೆ. ಇಲ್ಲಿ ಮತ್ತೆರಡು ಸಂಗತಿಗಳನ್ನು ಗಮನಿಸಬೇಕಾಗಿದೆ.

ಹಸ್ತಪ್ರತಿಗಳ ಸಂಗ್ರಹಮಾಡಿ ಪರವ್ಯಕ್ತಿಗಳಿಂದ ಪರಸ್ಥಳಗಳಿಂದ ತಂದ ಮೇಲೆ ಅವುಗಳ ಜೋಡಣೆ ಎಂದರೆ ಸುವ್ಯವಸ್ಥಿತವಾಗಿ ಇಡುವುದು ಅತಿಮುಖ್ಯ. ಎಷ್ಟೋ ಹಸ್ತಪ್ರತಿ ಭಂಡಾರಗಳಲ್ಲಿ ಸಂಗ್ರಹಿಸಿ ತಂದ ಹಸ್ತಪ್ರತಿಗಳನ್ನು ಅವ್ಯವಸ್ಥಿತವಾಗಿ ಇಟ್ಟಿರುವುದನ್ನು ಕಾಣುತ್ತೇವೆ. ವ್ಯವಸ್ಥೆಯ ದೃಷ್ಟಿಯಿಂದ ಈ ಕೆಳಕಂಡ ಅಂಶಗಳನ್ನು ಗಮನಿಸುವುದು

ಅಗತ್ಯವಾಗಿದೆ.

1. ತಂದ ಅಥವಾ ಸಂಗ್ರಹಿಸಿ ಹಸ್ತಪ್ರತಿಗಳ ಮೇಲಿನ ಪತ್ರಗಳ ನಡುವೆ ಇರುವ ಕಸ, ಧೂಳನ್ನು ಕೋಮಲವಾಗಿ ಎಚ್ಚರಿಕೆಯಿಂದ ಕುಂಚದಿಂದಲೋ ಮೃದುಬಟ್ಟೆಯಿಂದಲೋ ಒರೆಸಿ ತೆಗೆಯಬೇಕು.

2. ಪ್ರತಿ ಹಸ್ತಪ್ರತಿ ಕಟ್ಟುಗಳಲ್ಲಿ ಇರುವ ಗ್ರಂಥಗಳ ಹೆಸರುಗಳನ್ನು ಪರಿಶೀಲಿಸಿ ಹೆಸರುಗಳನ್ನು ಗ್ರಂಥದ ಮೇಲ್ಭಾಗದಲ್ಲಿ ಒಂದು ಬಿಳಿ ಹಾಳೆಯಲ್ಲಿ ಬರೆದು ಅಂಟಿಸಬೇಕು ಇಲ್ಲವೇ ಜತೆಗಿರಿಸಬೇಕು. ಗ್ರಂಥದ ಹೆಸರಿನ ಜತೆಗೆ ಲೇಖಕ ಮತ್ತು ವಿಷಯದ ಪ್ರಕಾರ ಬರೆದಿಡಬೇಕು. ಪ್ರತಿಗಂಥಕ್ಕೂ ಅಥವಾ ಕಟ್ಟಿಗೂ ಒಂದು ಕ್ರಮಸಂಖ್ಯೆ ಕೊಟ್ಟು ಆ ಪ್ರಕಾರ ಜೋಡಿಸಿಡಬೇಕು.

3. ಗಾಜಿನ ಬಾಗಿಲುಗಳಿರುವ ಬೀರುಗಳಲ್ಲಿ ಅಥವಾ ಗಾಳಿ ಬೆಳಕು ನಿರ್ಮಲವಾಗಿರುವ ತೆರೆದ ಕಪಾಟುಗಳಲ್ಲಿ ಇರಿಸಬೇಕು. ಒಂದರ ಮೇಲೊಂದನ್ನು ಹೇರಬಾರದು.

4. ಹಸ್ತಪ್ರತಿಯ ಕ್ರಮಸಂಖ್ಯೆಗೆ ಅನುಸಾರವಾಗಿ ಉತ್ತಮ ಕಾಗದ ಕಟ್ಟು ಇರುವ ದಾಖಲೆ ರಿಜಿಸ್ಟರಿನಲ್ಲಿ ಮತ್ತು ಸೂಚೀ ಪಟ್ಟಿಕೆಯಲ್ಲೂ ಹಸ್ತಪ್ರತಿಯ ಸಂಖ್ಯೆ ಕರ್ತೃ, ಕೃತಿಯ ವಿಷಯ ಭಾಷೆ–ಲಿಪಿ ಗರಿಗಳ ಸಂಖ್ಯೆ ಗ್ರಂಥಗಳ ಹೆಸರು ಇತ್ಯಾದಿ ನಮೂದಿಸಬೇಕು.

5. ವಿವರಣಾತ್ಮಕ ಹಸ್ತಪ್ರತಿ ಸೂಚಿಯಲ್ಲಿ ಈ ಮಾಹಿತಿಗಳ ಜತೆಗೆ ಕೃತಿಯ ಆದಿ, ಅಂತ್ಯ, ಗರಿಗಳ ಅಳತೆ, ಹರಿದ ಅಥವಾ ಉದ್ದವಾದ ಗರಿಗಳ ವಿವರ, ದಾನಿಗಳ ಹೆಸರು, ಸಿಕ್ಕ ಸ್ಥಳ, ಕಾಗದ ಅಥವಾ ಓಲೆಗರಿ ಎಂಬ ಸಂಗತಿ ಇತ್ಯಾದಿ ವಿವರಗಳನ್ನು ಒಳಗೊಂಡ ಸೂಚಿಯನ್ನು ಸಿದ್ಧಪಡಿಸಬೇಕು.

ಹೀಗೆ ಹಸ್ತಪ್ರತಿಗಳನ್ನು ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸುವ ವಿಷಯಗಳನ್ನು ಎರಡು ಬಗೆಯಾಗಿ ವರ್ಗೀಕರಿಸಬಹುದು. ಒಂದು ಬಾಹ್ಯ ವ್ಯವಸ್ಥೆ ಇನ್ನೊಂದು ಆಂತರಿಕ ವ್ಯವಸ್ಥೆ ಹಸ್ತಪ್ರತಿಗಳಿಗೆ ಕ್ರಮಸಂಖ್ಯೆ ಕೊಡುವುದು. ಧೂಳು, ಕಸ ತೆಗೆದು ಜೋಡಿಸುವುದು, ಕಪಾಟುಗಳಲ್ಲಿ ಓರಣವಾಗಿ ಜೋಡಿಸುವುದು ಕಟ್ಟುಗಳ ಮೇಲೆ ರಾಸಾಯನಿಕ ವಸ್ತು ಸಿಂಪಡಿಸುವುದು ಇದೇ ಮೊದಲಾದವು ಬಾಹ್ಯ ವ್ಯವಸ್ಥೆಯ ಸಂಗತಿಗಳಾದರೆ. ಕಟ್ಟುಗಳ ಮೇಲೆ ಕೃತಿಕಾರನ ಹೆಸರು ಕೃತಿಯ ಹೆಸರು ಭಾಷೆ, ಲಿಪಿ, ಗರಿಗಳ ಸಂಖ್ಯೆ ಕ್ರಮಸಂಖ್ಯೆ ಮೊದಲಾದ ವಿವರಗಳನ್ನು ಲಿಖಿಸುವುದು. ಎಲ್ಲ ಕಟ್ಟುಗಳ ಲೇಖಕ ಸೂಚಿ, ಕೃತಿಸೂಚಿ ವಿಷಯ ಸೂಚಿಗಳನ್ನು ಸಿದ್ಧಪಡಿಸುವುದು. ಕೃತಿಯ ಸಮಗ್ರ ವಿವರಗಳನ್ನು ಒಳಗೊಂಡ ವಿವರಣಾತ್ಮಕ ಸೂಚಿ ರಚನೆ ಇವೇ ಮೊದಲಾದವು ಆಂತರಿಕ ವ್ಯವಸ್ಥೆ ಆಗುತ್ತದೆ. ಬೇರೆ ಮಾತಿನಲ್ಲಿ ಹೇಳಬಹುದಾದರೆ ಜೋಡಣೆ, ಓದಿ ದಾಖಲಿಸುವುದು ಎಂದು ಬಾಹ್ಯ ಆಂತರಿಕ ವ್ಯವಸ್ಥೆ ಕಾರ್ಯಗಳನ್ನು ಗುರುತಿಸಬಹುದು.

**ವರ್ಣನಾತ್ಮಕ ಹಸ್ತಪ್ರತಿಸೂಚಿಗಳು:**

ಯಾವಬಗೆಯ ಯಾರಾರ ಯಾವ ಯಾವ ಕೃತಿಗಳಿವೆ ಎಂಬ ಸಾಮಾನ್ಯ ಮಾಹಿತಿ, ಮತ್ತೊಂದು ಗ್ರಂಥ ಭಂಡಾರದಿಂದ ತಿಳಿಯಲು ಸಾಮಾನ್ಯರಿಗೆ ಹಸ್ತಪ್ರತಿ ಸೂಚಿ ಸಾಕಾಗುತ್ತದೆ. ಆದರೆ ಸಂಶೋಧಕರಿಗೆ, ಗ್ರಂಥಸಂಪಾದಕರಿಗೆ, ಇಷ್ಟೇ ವಿಷಯ ಸಾಲದು, ವರ್ಣನಾತ್ಮಕ ಹಸ್ತಪ್ರತಿ ಸೂಚಿ ಬೇಕಾಗುತ್ತದೆ. ಇದರಲ್ಲಿ

1. ಕೃತಿ
2. ಕಾಲ
3. ಕರ್ತೃ
5. ಲಿಪಿ
6. ಪತ್ರಸಂಖ್ಯೆ
7. ಕ್ರಮಸಂಖ್ಯೆ
8. ಪತ್ರದ ವಸ್ತು (ಕೋರಿಕಾಗದವೇ ಓಲೆಗರಿಯೇ?)
9. ಪತ್ರದ ಒಂದು ಮಗ್ಗುಲಲ್ಲಿರುವ ಸಾಲುಗಳು
10. ಪ್ರತಿ ಸಾಲಿನಲ್ಲಿರುವ ಅಕ್ಷರಗಳ ಸರಾಸರಿ ಅಕ್ಷರಗಳು
11. ಪ್ರತಿ ಸಮಗ್ರವೇ ಅಸಮಗ್ರವೇ
12. ಪ್ರತಿಯಕಾಲ
13. ಲುಪ್ತ (ಇಲ್ಲದ) ಹಾಳೆಗಳು ಅಥವಾ ಹರಿದ ಹಾಳೆಗಳು
14. ಪ್ರತಿಕಾರರ ಹೆಸರು
15. ಪ್ರತಿ ದೊರೆತ ಸ್ಥಳ
16. ಪ್ರಕಟಿತವೇ? ಅಪ್ರಕಟಿತವೇ
17. ಕೃತಿಯ ಆದಿ
18. ಕೃತಿಯ ಅಂತ್ಯ
19. ಕಟ್ಟಿನಲ್ಲಿರುವ ಇತರ ಗ್ರಂಥಗಳು
20. ಕೃತಿಯ ಸಾಹಿತ್ಯ ಪ್ರಕಾರ ಕಾವ್ಯ, ಗದ್ಯ, ಪದ್ಯ, ಹೆಸರು ಇತ್ಯಾದಿ ವಿವರಗಳನ್ನು ಒಳಗೊಂಡಿರುತ್ತದೆ. ಹಸ್ತಪ್ರತಿಗಳ ಬಗ್ಗೆ ಪೂರ್ಣಮಾಹಿತಿ ದೊರೆಯುವುದು ವಿವರಣಾತ್ಮಕ ಹಸ್ತಪ್ರತಿ ಸೂಚಿಗಳಿಂದಲೇ ಈ ಬಗೆಯ ವಿವರಗಳನ್ನು ಒಳಗೊಂಡ ಹಸ್ತಪ್ರತಿಗಳ ಸೂಚೀಕರಣ ಬಹು ಹಿಂದಿನಿಂದಿನಿಂದಲೂ ವಿದೇಶೀಯರಿಂದ ನಡೆದು ಬಂದಿದೆ. "ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಬಾಡ್ಲೆಯಿನ್ ಗ್ರಂಥಾಲಯದಲ್ಲಿದ್ದ ಭಾರತೀಯ ಹಸ್ತಪ್ರತಿಗಳ ಸೂಚಿಯೊಂದನ್ನು ಥಿಯೋಡೋರ ಜಾಫ್ರೆಟ್ ಎಂಬ ಪಾಶ್ಚಾತ್ಯ ವಿದ್ವಾಂಸರು ಪರಿಶೀಲಿಸಿ

1859ರಲ್ಲಿಯೇ ಪ್ರಕಟಿಸಿದರು ತದನಂತರ ಫ್ರಾಂರ್ಝ್, ಕೀಲ್ ಹಾರ್ನ್, ಜಾರ್ಜ್ ಬುಹ್ಲರ್, ಎ.ಸಿ.ಬರ್ನೆಲ್ ಮುಂತಾದವರು ಈ ಕೆಲಸ ಮುಂದೆ ಸಾಗಿಸಿಕೊಂಡು ಬಂದರು ಕೀಲ್‌ಹಾರ್ನ್ ಆಗಿನ ಮುಂಬೈ ಪ್ರಾಂತದ ದಕ್ಷಿಣ ಹಾಗೂ ಮಧ್ಯ ಪ್ರಾಂತದಲ್ಲಿನ ವಿಭಾಗದಲ್ಲಿದ್ದ ಖಾಸಗಿ ಹಸ್ತಪ್ರತಿಗಳ ಗ್ರಂಥಾಲಯ ಸೂಚಿಗಳನ್ನು ತಯಾರಿಸಿದರೆ ಬುಹ್ಲರ್ ಅವರು ಗುಜರಾತ, ಸಿಂಧ, ರಾಜಪುತಾನ, ಮೊದಲಾದ ಕಡೆಗಳಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳ ಸೂಚಿಗಳನ್ನು ಬರ್ನೆಲ್ ಅವರು ತಂಜಾವೂರು ಅರಮನೆಯಲ್ಲಿದ್ದು ಹಸ್ತಪ್ರತಿಗಳನ್ನು ತಯಾರಿಸಿದರು."1 (ಹಸ್ತಪ್ರತಿ ಶಾಸ್ತ್ರಪರಿಚಯ ಬಿ.ಎಸ್.ಸಣ್ಣಯ್ಯ 1992 ಪುಟ 45) ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಪ್ರಕಟನೆ

**ಕಲಬುರ್ಗಿ ಅವರ ವರ್ಗೀಕರಣ:**

ಎಂ.ಎಂ.ಕಲಬುರ್ಗಿ ಅವರು ದರ್ಶಕ ಸೂಚಿ, ವಿವರಣಾತ್ಮಕ ಸೂಚಿ ಸಮಗ್ರ ಸೂಚಿ ಎಂದು ಸೂಚೀಕರಣ ವಿಧಾನಗಳನ್ನು ವರ್ಗೀಕರಿಸಿದ್ದಾರೆ ಈಗಾಗಲೇ ಬೇರೆ ಬೇರೆ ಸಂಸ್ಥೆಗಳು ಪ್ರಕಟಿಸಿದ ಸೂಚಿಗಳ ವಿವರಗಳನ್ನು ಗಮನಿಸಿ ಅವರು ತಮ್ಮದೇ ಆದ ಸೂಚೀಕರಣ ವಿಧಾನವನ್ನು ರೂಢಿಸಿದ್ದಾರೆ. ಇದು ಜನಪ್ರಿಯವಾಗಿದೆ ಮತ್ತು ಹೆಚ್ಚು ಉಪಯುಕ್ತವಾಗಿದೆ. ಕೆಲವಾರು ಮಿತಿಗಳಿದ್ದರೂ ಉಳಿದ ಸಂಸ್ಥೆಗಳ ಸೂಚಿಗಳಿಗಿಂತ ಮೇಲೆನಿಸಿದೆ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 4 ಸಂಪುಟಗಳಲ್ಲಿ ಕಲಬುರ್ಗಿ ಅವರ ಕೃತಿ – ಪ್ರತಿ ಪರಿಚಯ ವಿಧಾನವನ್ನೇ ಸೂಚೀಕರಣಕ್ಕೆ ಬಳಸಿಕೊಂಡಿದ್ದಾರೆ. ಅಲ್ಲಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಉದಾಹರಣೆಗೆ ಕಲಬುರ್ಗಿ ಹೇಳುತ್ತಾರೆ. "ಒಂದು ಕಟ್ಟಿನಲ್ಲಿ ಅನೇಕ ಪ್ರತಿಗಳು ಅಡಕವಾಗಿದ್ದರೆ ಮೊದಲಿನ ಪ್ರತಿಯ ಸೂಚೀಕಾರ್ಡಿನಲ್ಲಿ ಮಾತ್ರ ಎಲ್ಲ ಪ್ರತಿಗಳ ಯಾದಿಯನ್ನು ಕೊಡಬೇಕು"[21]. ಆದರೆ ಕನ್ನಡಿ ವಿಶ್ವವಿದ್ಯಾಲಯ "ಸಂಸ್ಕೃತ ಮತ್ತು ಇತರ ಭಾಷೆಗಳ ಕೃತಿಸೂಚಿಯನ್ನು ಪ್ರತ್ಯೇಕ ಸಂಪುಟಗಳಲ್ಲಿ ಪ್ರಕಟಿಸಲಾಗುವುದರಿಂದ ಅಂಥ ಕೃತಿಗಳನ್ನು ಕೈಬಿಟ್ಟು ಇಲ್ಲಿ ಕೇವಲ ಕನ್ನಡ ಕೃತಿಗಳನ್ನು ಗಮನಿಸಲಾಗಿದೆ"ಎಂದು ಹೇಳಿದ್ದಾರೆ[22]. ಇಲ್ಲಿ ಕಟ್ಟಿನಲ್ಲಿರುವ ಎಲ್ಲ ಕೃತಿಗಳ ಯಾದಿ ಕೊಡಬೇಕೆಂಬ ನಿಯಮ ಪಾಲಿಸಿಲ್ಲ ಇದು ತಪ್ಪು ಅಲ್ಲ. ತನ್ನ ನೀತಿಗೆ ಅನುಗುಣವಾಗಿ ಮಾಡಿಕೊಂಡ ಅರ್ಥಪೂರ್ಣ ಮಾರ್ಪಾಡು.

**ಸೂಚೀಕರಣ ವಿಧಾನ–ಕೃತಿ–ಪ್ರತಿ ಪದ್ಧತಿ:** 1. ಯಾವುದೇ ಹಸ್ತಪ್ರತಿಯಲ್ಲಿ ಕೃತಿ ಮತ್ತು ಪ್ರತಿ ಎಂಬ ಎರಡು ನಾಟಕಗಳನ್ನು ಒಳಗೊಂಡಿರುತ್ತದೆ. ಇವುಗಳಲ್ಲಿ ಕೃತಿ ಎನ್ನುವುದು ಕವಿ ಬರೆದ ಪಾಠ ಪ್ರತಿಯೆನ್ನುವುದು ಲಿಪಿಕಾರ ಬರೆದ ಪಾಠ ಮತ್ತು ಬಳಸಿದ ವಸ್ತುವಾಗಿದೆ. ಆದ್ದರಿಂದ ಹಸ್ತಪ್ರತಿ ವಿವರವನ್ನು ಕೃತಿ ಪರಿಚಯ–ಪ್ರತಿಪರಿಚಯ ಎಂದು ಎರಡು ಹಂತಗಳಲ್ಲಿ ಹೀಗೆ ಸೂಚಿಯಲ್ಲಿ ಸಂಗ್ರಹಿಸಬೇಕು.

## ಕೃತಿಪರಿಚಯ

1 ಶೀರ್ಷಿಕೆ    4. ಕವಿ    6. ವಿಷಯ

2. ಪ್ರಕಾರ    5. ಕಾಲ    7. ಪ್ರಕಟಿತ/ಅಪ್ರಕಟಿತ

3. ವಿಶೇಷ    (ಸ್ಥಳ)

## ಪ್ರತಿ ಪರಿಚಯ

1. ಬರೆಯಲು ಬಳಸಿದ ವಸ್ತು ಮತ್ತು ನಂ.

2. ಹಸ್ತಪ್ರತಿ ಸ್ವರೂಪ    7. ಆಕಾರ    8 ಪುಟ

3. ಆದಿ:    9. ಲಿಪಿ ಸ್ವರೂಪ 10.ಭಾಷಾ ಸ್ವರೂಪ

4. ಅಂತ್ಯ:

5. ವಿಶೇಷ:

6. ಕಟ್ಟಿನಲ್ಲಿರುವ ಪ್ರತಿಗಳು:

**ಮಾದರಿ**    **ಕೃತಿ ಪರಿಚಯ**

1. ಅನುಭವಾಮೃತ

(ಶೀರ್ಷಿಕೆ)

2. ಮಹಲಿಂಗರಂಗ–1675    3. ಭಾಮಿನಿ ಷಟ್ಪದಿ

(ಕವಿ–ಕಾಲ)    (ಪ್ರಕಾರ)

4. ವೇದಾಂತ ವಿಚಾರ ತಿಳಿಯುತ್ತದೆ.

(ವಿಷಯ)

5. ತಾ. ಪ್ರ. 414    7. $14^{11}+2^{11}$    9. 35–99

(ವಸ್ತು – ಸಂಖ್ಯೆ)    (ಆಕಾರ)    (ಪುಟ ಸಂಖ್ಯೆ)

ಮಧ್ಯಮ    ಸಾಧಾರಣ

6. (ಹಸ್ತಪ್ರತಿ ಮಧ್ಯಮ ಸ್ವರೂಪ) 8. (ಲಿಪಿ ಸ್ವರೂಪ)10.(ಭಾಷಾಸ್ವರೂಪ)

ಆದಿ: ಬಾಲಕನೆ ಕೇಳು ಚಾಕ್ಷುಷ ಮೂಲವೆಂದೇ ಪ್ರಬಲ ಶೃತಿ ಶಿಲ ಜಾಲದುರ್ಬಲ ಶೃತಿ ಶಶಿಗಳನ್ನು ಖಂಡಿಸುವುದೆಂದಾ ॥64॥ ಘಟಕೆ ಬೆಳಗುವ ದೀಪವೆಕೆಂತಾ ಘಟಕೆ ಭಿನ್ನಕೆಯಾಗಿ ತೋರ್ಪುದೆ ಸಟೆಯನಿಪ ಸುಶ್ರಾದ್ಧ್ಯನಾತ್ಮಗಳು ಪ್ರಕಾಶಿಸುವಾ

ಅಂತ್ಯ: ಅನ್ನಮಯ ಮೊದಲಾದ ಕೋಶಗಳಂ + + + +ನಲ್ಲೆಂ ದಾತ್ಮ ಬುದ್ಧಿಯ ಬನ್ನ ಬಡಿಸುವ ಬುದವು ತಾನಲ್ಲವೆಂದೆಂಬಾ/ ಭಿನ್ನ ಬುದ್ಧಿ– – – "

ವಿಶೇಷ: ಅಸಮಗ್ರ, ಅಕ್ಷರಗಳು ಸಾಧಾರಣ

**ಈ ಕಟ್ಟಿನಲ್ಲಿರುವ ಕೃತಿಗಳು**

ಅನುಭವಾಮೃತ (ತಾ.ಪು 143.1)
ಗಂಗೆಗೌರಿ ಸಂವಾದ (ತಾ.ಪು 143.2)
ಭೈರವೇಶ್ವರನ ಕಥೆ (ತಾ.ಪು 143.3)

ಅನುಬಂಧದಲ್ಲಿ ಕವಿಸೂಚಿ, ಸ್ಥಳನಾಮಸೂಚಿ, ಹಸ್ತಪ್ರತಿ ಲಿಪಿಕಾರರ ಸೂಚಿ, ಹಸ್ತಪ್ರತಿ ನೀಡಿದ ದಾನಿಗಳ ಹೆಸರುಗಳನ್ನು ನೀಡಲಾಗಿದೆ. ಇದು ಕ.ವಿ.ವಿ ಸೂಚಿಯ ವೈಶಿಷ್ಟ್ಯವಾಗಿದೆ. ಉಪಯುಕ್ತವಾಗಿದೆ.

ಮೇಲ್ಕಂಡ ಸೂಚಿಯ ಶೀರ್ಷಿಕೆಗಳ ಬಗ್ಗೆ ಕಲಬುರ್ಗಿ ಅವರು ಈ ಕೆಳಕಂಡ ವಿವರಣೆಗಳನ್ನು ಇತ್ತಿದ್ದಾರೆ.

1. ಸೂಚಿಪತ್ರವಲ್ಲಿ ಇಲ್ಲಿ ತೋರಿಸಿರುವ ಶೀರ್ಷಿಕೆ ಪದಗಳಲ್ಲಿ ಆದಿ, ಅಂತ್ಯ ವಿಶೇಷ ಕಟ್ಟಿನಲ್ಲಿರುವ ಪ್ರತಿಗಳು ಈ ಶೀರ್ಷಿಕೆಗಳನ್ನು ಬಳಸಿಕೊಂಡು ವಿವರಗಳನ್ನು ತುಂಬಬೇಕು.

2. ಉಳಿದ ಅಂಶಗಳನ್ನು ಶೀರ್ಷಿಕೆ ಬರೆಯದೆ ಒಂದು ಕ್ರಮದಲ್ಲಿ ಆಯಾ ಸ್ಥಾನದಲ್ಲಿ ವಿವರಗಳನ್ನು ತುಂಬಬೇಕು. ಉದಾ: ಸೂಚಿಯ ಮೊದಲಿಗೆ ಮೇಲ್ಭಾಗದಲ್ಲಿ ಮಧ್ಯದಲ್ಲಿ ಕೃತಿಯ ಹೆಸರಿದೆ. ಅನುಭವಾಮೃತ ಕೃತಿ ಶೀರ್ಷಿಕೆ ಎಂಬ ಶೀರ್ಷಿಕೆ ಇಲ್ಲ.

3. ಪ್ರಕಾರ ಎಂಬಲ್ಲಿ ಗದ್ಯ, ಚಂಪೂ, ರಗಳೆ, ಷಟ್ಪದಿ, ಇತ್ಯಾದಿ ದಾಖಲೆಗಳಿರಬೇಕು.

4. ವಿಷಯ ಎಂಬಲ್ಲಿ ಪುರಾಣ, ಚರಿತ್ರೆ, ಛಂದಸ್ಸು ಹೀಗೆ ನಮೂದಿಸಬೇಕು.

1. ಕೃತಿ ಪ್ರಕಟವಾಗದಿದ್ದಲ್ಲಿ ಅ ಪ್ರಕಟಿತವೆಂದೋ ಪ್ರಕಟವಾಗಿದ್ದರೆ ಸಂಪಾದಕ ಹೆಸರು/ ವರ್ಷಗಳನ್ನು ನಮೂದಿಸಬೇಕು.

5. ವಸ್ತು,ಸಂ ಎಂಬಲ್ಲಿ ಬರೆಯಲು ಬಳಸಿದುದು ತಾಳೆಗರಿಯೋ ಸ್ವದೇಶಿ ಕಾಗದ ಪ್ರತಿಯೋ ಎಂಬ ಸೂಚನೆ ಮತ್ತು ಆ ಹಸ್ತ ಪ್ರತಿಯ ನಂಬರು ಬರೆಯಬೇಕು **ಉದಾ :** ತಾ ಪ್ರ/45 ಸ್ವ ಕಾಪ್ರ/45 ವಿ ಕಾಪ್ರ/95
6. ಆಕಾರ ಎಂಬಲ್ಲಿ ಉದ್ದ-ಅಗಲಗಳನ್ನು ಅಂಗಲಗಳಲ್ಲಿ 3"+15" ಹೀಗೆ ಬರೆಯಬೇಕು.
7. ಪುಟದ ಸ್ಥಾನದಲ್ಲಿ ಪ್ರಸ್ತುತ ಕೃತಿ ಯಾವ ಪುಟದಿಂದ ಯಾವ ಪುಟದವರೆಗೆ ವ್ಯಾಪಿಸಿದೆ ಎಂಬುದನ್ನು ಸೂಚಿಸಬೇಕು ಉದಾ: 25-75.

**ಕಾರ್ಡುಗಳು:**

ಇನ್ನು ಹಸ್ತಪ್ರತಿ ಸ್ವರೂಪ, ಲಿಪಿಸ್ವರೂಪ, ಭಾಷಾಸ್ವರೂಪಗಳ ವಿಷಯವಾಗಿ ಉತ್ತಮ, ಮಧ್ಯಮ, ಕನಿಷ್ಠ, ಎಂಬ ಮಾತುಗಳನ್ನು ಬಳಸಿದರೆ ಸಾಕು. ಒಂದು ಕಟ್ಟಿನಲ್ಲಿ ಅನೇಕ ಪ್ರತಿಗಳ ಅಡಕವಾಗಿದ್ದರೆ ಮೊದಲಿನ ಪ್ರತಿಯ ಸೂಚೀಕಾರ್ಡಿನಲ್ಲಿ ಮಾತ್ರ "ಕಟ್ಟಿನಲ್ಲಿರುವ ಪ್ರತಿಗಳು" ಶೀರ್ಷಿಕೆಯ ಮುಂದೆ ಅದರಲ್ಲಿರುವ ಪ್ರಥಮೇತರ ಪ್ರತಿಗಳನ್ನು ಪರಿಚಯಿಸುವಾಗ ಹೀಗೆ ಯಾದಿ ಕೊಡದೆ "ಕಟ್ಟಿನಲ್ಲಿರುವ ಪ್ರತಿಗಳು ಕಾಲಂ ಮುಂದೆ ನೋಡಿ ಕ್ರಮಾಂಶ....... ಎಂದು ಪ್ರಥಮ ಪ್ರತಿಯ ಕ್ರಮಾಂಶ ಸೂಚಿಸಿದರೆ ಸಾಕು.

ಅನ್ಯಭಾಷೆಯ ಹಸ್ತಪ್ರತಿಗಳನ್ನು ಹೊರಗಿಟ್ಟು ಕನ್ನಡ ಭಾಷೆಯ ಹಸ್ತಪ್ರತಿಗಳನ್ನೇ ಕುರಿತು ಸೂಚಿಯನ್ನು ರಚಿಸುತ್ತಿರುವುದರಿಂದ ಭಾಷೆಯೆಂಬ ಶೀರ್ಷಿಕೆ ಇಲ್ಲಿ ಅನವಶ್ಯಕ ಮುದ್ರಿತ ಗ್ರಂಥಗಳಾಗಿ 3"+5" ಆಕಾರಾದಿ ಕಾರ್ಡುಗಳನ್ನು ಬಳಸುತ್ತೇವೆ ಹಸ್ತಪ್ರತಿ ಸಂದರ್ಭದಲ್ಲಿ ವಿವರಗಳ ಸಂಖ್ಯೆ ಬಹಳವಿರುವುದರಿಂದ 4+6 ಕಾರ್ಡುಗಳನ್ನು ಬಳಸಬಹುದಾಗಿದೆ. ಪ್ರತಿಯೊಂದು ಕಾರ್ಡನ್ನು ಮೂರು ಪ್ರತಿಗಳಾಗಿ ಮುದ್ರಿಸಬೇಕು ಇವುಗಳಲ್ಲಿ ಒಂದು ಕಾರ್ಡನ್ನು ಶೀರ್ಷಿಕೆ ಟೈಟಲ್ ವರ್ಗೀಕರಣಕ್ಕೆ ಸೇರಿಸುತ್ತಿದ್ದಾರೆ. ಅಲ್ಲಿಯ ಕೃತಿ ಶೀರ್ಷಿಕೆಯ ಕೆಳಗೆ ಗೆರೆ ಎಳೆಯಬೇಕು ಇನ್ನೊಂದು ಕಾರ್ಡನ್ನು ಲೇಖಕ (ಆಥರ್) ವರ್ಗೀಕರಣಕ್ಕೆ ಸೇರಿಸುತ್ತಿದ್ದರೆ, ಅಲ್ಲಿಯ ಲೇಖಕನ ಹೆಸರಿನ ಕೆಳಗೆ ಗೆರೆ ಎಳೆಯಬೇಕು ಇನ್ನೊಂದು ಕಾರ್ಡನ್ನು ವಿಷಯ (ಸಬ್ಜೆಕ್ಟ್) ವರ್ಗೀಕರಣಕ್ಕೆ ಸೇರಿಸುತ್ತಿದ್ದರೆ ಅಲ್ಲಿನ ವಿಷಯದ ಕೆಳಗೆ ಗೆರೆ ಎಳೆಯಬೇಕು. ಈ ಉದ್ದೇಶದ ಸಫಲತೆಗಾಗಿಯೇ ಕಾರ್ಡಿನಲ್ಲಿ ಶೀರ್ಷಿಕೆ ಲೇಖಕ ವಿಷಯಗಳಿಗೆ ಮೊದಲ ಸಾಲಿನಲ್ಲಿ ಸ್ಥಳಾವಕಾಶ ಮಾಡಿಕೊಡಲಾಗಿದೆ.

ಹೀಗೆ ಸೂಚೀಕಾರ್ಡುಗಳನ್ನು ಸಿದ್ಧಪಡಿಸಿ ನೋಂದಣಿ ಪುಸ್ತಕದಲ್ಲಿ ವಿವರಗಳನ್ನು ಬರೆದುಕೊಂಡು, ಕಟ್ಟುಗಳಿಗೆ ನಂಬರು ಹೆಸರುಗಳನ್ನು ಅಂಟಿಸಿ, ಅವುಗಳನ್ನು ಸಂರಕ್ಷಣಾ ವಿಭಾಗಕ್ಕೆ ಕಳಿಸಬೇಕು. ಒಟ್ಟಿನಲ್ಲಿ ಸೂಚಿಗಳು ರೈಲು ವೇಳಾ ಪತ್ರಿಕೆಯಂತೆ ಹಸ್ತಪ್ರತಿ

ಅಭ್ಯಾಸಿಗಳಿಗೆ ನಿರ್ದಿಷ್ಟ ಮಾರ್ಗದರ್ಶನ ನೀಡಬೇಕು ಈ ರೀತಿ ಕಾರ್ಡಿನಲ್ಲಿ ಅಡಕಗೊಂಡಿದ್ದರೆ ಗ್ರಂಥರೂಪದಲ್ಲಿ ಪ್ರಕಟಿಸಿದಾಗ ವರ್ಣನಾತ್ಮಕ ಹಸ್ತಪ್ರತಿಗಳ ಗ್ರಂಥ ಸೂಚಿ ಸಿದ್ಧವಾಗುತ್ತದೆ." ಕಲಬುರ್ಗಿ ಅವರು ಅಚ್ಚುಕಟ್ಟಾಗಿ ಸೂಚೀಕರಣ ಪದ್ಧತಿಯನ್ನು ಸೂಚಿಸಿದ್ದಾರೆ. ಇದಕ್ಕೆ ಪೂರಕವಾಗಿ ಒಂದೆರಡು ಸಂಗತಿಗಳನ್ನು ಹೇಳಬಹುದಾಗಿದೆ.

1. ಕಾರ್ಡುಗಳಲ್ಲಿ ಕೆಲವು ವಿಭಾಗಗಳಿಗೆ ಶೀರ್ಷಿಕೆ ಕೊಟ್ಟು ಅಕ್ಷರಗಳನ್ನು ಲುಪ್ತವಾದಾಗ ಲುಪ್ತಾಕ್ಷರ ಸಂಖ್ಯೆಯನ್ನು +ಚಿಹ್ನೆ ಬಳಸುವುದೂ ಸಾಕಷ್ಟು ಅಕ್ಷರ ಪದಗಳು ಬಿಟ್ಟಿದ್ದರೆ +ಚಿಹ್ನೆ ಹಾಕಿ 8 ಅಕ್ಷರಗಳು ಇತ್ಯಾದಿ ಲುಪ್ತ ಅಕ್ಷರ ಸಂಖ್ಯೆ ನಮೂದಿಸಬಹುದು ಎನಿಸುತ್ತದೆ. ಇನ್ನು ಹಸ್ತಪ್ರತಿ ಸ್ವರೂಪವನ್ನು ಉತ್ತಮ ಮಧ್ಯಮ ಕನಿಷ್ಠ ಎಂದು ಸೂಚಿಸುವ ಬದಲು ಸಮಗ್ರ, ಅಸಮಗ್ರ ಅಥವಾ 4 ಗರಿಲುಪ್ತ ಇತ್ಯಾದಿ ಗುರುತಿಸಬಹುದು ಒಳ್ಳೆಯಮು, ವಿಶೇಷದಲ್ಲಿ ಸಚಿತ್ರ/ಅಚಿತ್ರ ಎಂಬಂಶವನ್ನು ಬೆಳ್ಳಿ, ಬಂಗಾರದ ಬಳೆ ಕಟ್ಟು ಇತ್ಯಾದಿ ಇರುವುದನ್ನು ಇತರೆ ವಿಶೇಷ ಅಂಶಗಳನ್ನು ಗುರುತಿಸುವುದು ಒಳ್ಳೆಯದು ಇದು ವಸ್ತುವಿಗೆ ಸಂಬಂಧಿಸಿ ಸಂಗತಿ ಆದರೂ ಅದನ್ನು ವಿಶೇಷದಲ್ಲಿ ಗುರುತಿಸಬೇಕು.

**ಕಟ್ಟುಗಳು:**

ಕಟ್ಟುಗಳನ್ನು ಸೂಚಿ ಮಾಡಿದ ಮೇಲೆ ಅವುಗಳನ್ನು ಜೋಡಿಸಿಟ್ಟ ಕ್ರಮವನ್ನು ಬದಲಿಸಬಹುದು. ಕಟ್ಟಿನ ಕ್ರಮಸಂಖ್ಯೆ ಬದಲಿಸಬೇಕಿಲ್ಲ ಉದಾಹರಣೆಗೆ ವಿಷಯಾನುಸಾರ ಕಟ್ಟುಗಳನ್ನು ಜೋಡಿಸಿ ಆ ಪ್ರಕಾರದ ವಿಭಾಗದಲ್ಲಿ ಇರುವ ಕಟ್ಟುಗಳ ಸಂಖ್ಯೆಯನ್ನು ಪಟ್ಟಿಮಾಡಿ ಇಟ್ಟರೆ ಆಯಾ ವಿಷಯದ ಅಭ್ಯಾಸಿಗಳು ಒಂದೆಡೆಯೇ ಕುಳಿತು ಅಭ್ಯಾಸಮಾಡಬಹುದು. ಒಟ್ಟಿನಲ್ಲಿ ಸೂಚೀಕರಣ ಕಾರ್ಯ ಅಗತ್ಯದ್ದು ಮಹತ್ವದ್ದು ಎಂಬುದರಲ್ಲಿ ಅನುಮಾನವಿಲ್ಲ. ಸೂಚೀಕರಣ ಮಾಡಲು ವ್ಯಕ್ತಿಗೆ ಮುಖ್ಯವಾಗಿ ಭಾಷೆ–ಲಿಪಿ ಪರಿಚಯ ಇರಬೇಕು. ಭಾಷೆ–ಲಿಪಿ ಪರಿಚಯ ಇದ್ದರೂ ಎಷ್ಟೋ ಮಂದಿಗೆ ಪರಿಣತಿ ಇರುವುದಿಲ್ಲ ಕ್ರಮಬದ್ಧ ಅಧ್ಯಯನ ಇರುವುದಿಲ್ಲ ಇದಕ್ಕಾಗಿ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು ಅಗತ್ಯವಿದೆ. ಆಯಾ ಭಂಡಾರಗಳ ಹಿನ್ನೆಲೆಯಲ್ಲಿ ತರಬೇತಿ ಕೊಡುವುದು ಅಗತ್ಯವಿದೆ. ಉದಾಹರಣೆಗೆ ಒಂದು ಭಂಡಾರದಲ್ಲಿ ತಿಗಳಾರಿ ಲಿಪಿ ಹಸ್ತಪ್ರತಿಗಳು ಅಧಿಕವಿದ್ದರೆ ಅದರ ಬಗ್ಗೆ ವಿಶೇಷ ಶಿಬಿರ ಏರ್ಪಡಿಸಬೇಕು.

ಕೆಲವು ವಿಭಾಗಗಳಿಗೆ ಸೂಚಿಯಲ್ಲಿ ಸ್ಥಳ ನಿರ್ದೇಶನ ಮಾಡಿ ಶೀರ್ಷಿಕೆಕೊಡಬೇಕಿಲ್ಲ ಎಂದಿದ್ದಾರೆ. ಇದರ ಬದಲಿಗೆ ಆಯಾ ಶೀರ್ಷಿಕೆಗಳಿಗೆ ಸಂಖ್ಯೆ ಕೊಟ್ಟು ಸಂಖ್ಯೆ ಹಾಕಬಹುದು ಇಲ್ಲವೇ ಶೀರ್ಷಿಕೆಗಳನ್ನೇ ಅಚ್ಚುಮಾಡಿದರೆ ತಪ್ಪಲ್ಲ ಹೆಚ್ಚು ಅನುಕೂಲ ಎನಿಸುತ್ತದೆ. ಕಟ್ಟುಗಳಲ್ಲಿ ಇರುವ ಇತರ ಕೃತಿಗಳನ್ನು ಪಟ್ಟಿ ಮಾಡಬಹುದು ಸರಿ ಆದರೆ

ಅದರಲ್ಲಿ ಕೇವಲ ಹೆಸರು ಹೇಳುವುದರ ಜೊತೆಗೆ ಭಾಷೆ/ಲಿಪಿ ತಿಳಿಸುವುದು ಮುಖ್ಯ ಅಥವಾ ಕನ್ನಡೇತರ ಕೃತಿ ಇದ್ದಲ್ಲಿ ತಿಳಿಯುತ್ತದೆ. ಕೃತಿ ಪರಿಚಯ ಮತ್ತು ಪ್ರತಿ ಪರಿಚಯ ನಡುವೆ ದಪ್ಪ ಕಪ್ಪು ಚುಕ್ಕೆಗಳನ್ನು ಅವೆರಡನ್ನು ಪ್ರತ್ಯೇಕಿಸಲು ಬಳಸಲಾಗುತ್ತಿದೆ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿಗಳನ್ನು ಗಮನಿಸಬಹುದು. ಈ ಸೂಚನೆಯನ್ನು ಕನ್ನಡ ಹಸ್ತಪ್ರತಿ ಶಾಸ್ತ್ರ ಗ್ರಂಥದಲ್ಲಿ ಕಲಬುರ್ಗಿ ಅವರು ಉಲ್ಲೇಖಿಸಿದಂತಿಲ್ಲ (ನೋಡಿ ಕನ್ನಡ ಹಸ್ತಪ್ರತಿಶಾಸ್ತ್ರ) ಮುದ್ರಣ 1993) ಆ ಮೇಲೆ ಅಳವಡಿಸಿಕೊಂಡ ಸೂಚನೆ ಆಗಿರಬೇಕು ಕಪ್ಪುದಪ್ಪ ಚುಕ್ಕೆಬದಲು ಅಡ್ಡಗೆರೆಯನ್ನು ಬಳಸಬಹುದು ಎನಿಸುತ್ತದೆ. ಏಕೆಂದರೆ ಕೈಯಲ್ಲಿ ಸೂಚೀ ಸಂಪುಟ ಬರೆಯುವಾಗ ಕಪ್ಪು ಚುಕ್ಕೆ ಗುರುತಿಸುವುದಕ್ಕಿಂತ ಗೆರೆಎಳೆಯುವುದು ಸುಲಭ. ಹಸ್ತಪ್ರತಿ ದೊರೆತ ಸ್ಥಳಗಳನ್ನು ಕನ್ನಡ ಅಧ್ಯಯನ ಪೀಠದ ಸೂಚಿಯಲ್ಲಿ ಲೇಖಕನ ಸ್ಥಾನದ ಕೆಳಗೆ ಮುದ್ರಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಸೂಚಿಯಲ್ಲಿ ಅನುಬಂಧವಾಗಿ ಹಸ್ತಪ್ರತಿ ದೊರೆತ ಸ್ಥಳಗಳ ಪಟ್ಟಿ ನೀಡಲಾಗಿದೆ. ಇವೆರಡೂ ಇಲ್ಲಿನ ಸೂಚಿಗಳೂ ಇವೆ. ಇವೆರಡರಲ್ಲಿ ಒಂದು ಕ್ರಮ ಅನುಸರಿಸಬಹುದು ಅಗತ್ಯವಿದೆ. ಇನ್ನು ವಿವರಗಳು ತಿಳಿಯುವಾಗ ಆ ಸ್ಥಾನದಲ್ಲಿ? ಚಿಹ್ನೆಗಳನ್ನು ಬಳಸಿದ್ದಾರೆ. ಪ್ರತಿಯಲ್ಲಿ ಅಕ್ಷರ ವಾಕ್ಯ ಲಪ್ತವಾಗಿದ್ದರೆ XXX ಚಿಹ್ನೆಯನ್ನು ಹಸ್ತಪ್ರತಿಯಲ್ಲಿದ್ದು ಸೂಚಿಯಲ್ಲಿ ಬಿಟ್ಟಿದ್ದರೆ. ....... ಚಿಕ್ಕೆ ಸಾಲುಗಳನ್ನು ಬಳಸಲಾಗಿದೆ ಇದು ಸೂಕ್ತವಾಗಿದೆ.

ಸೂಚೀಕರಣ ಹಸ್ತಪ್ರತಿ ಭಂಡಾರಗಳಲ್ಲಿ ಮಾಡುವುದು ಸಾಮಾನ್ಯ ಪದ್ಧತಿ, ಈಗ ಹಸ್ತಪ್ರತಿಗಳ ಪ್ರತಿ ತೆಗೆವ ಆಧುನಿಕ ವಿದ್ಯುನ್ಮಾನ ಯಂತ್ರ ವ್ಯವಸ್ಥೆ ಇರುವುದರಿಂದ ಹಾಗೆ ಪ್ರತಿಗಳನ್ನು ತೆಗೆದು ವಿದ್ವಾಂಸರಿದ್ದ ಕಡೆಗೆ ಕಳಿಸಿ ಸೂಚಿಕಾರ್ಡುಗಳನ್ನು ಮಾಡಿಸಿದರೆ ಕೆಲಸ ಶೀಘ್ರವಾಗಿ ನಡೆಯುತ್ತದೆ. ನಮ್ಮಲ್ಲಿ ಎಲ್ಲಾಕಡೆ ಎಲ್ಲಾ ಭಾಷೆ ತಿಳಿದ ಪರಿಣತರು ಹಸ್ತಪ್ರತಿ ಭಂಡಾರಗಳಲ್ಲಿ ಇರುವುದಿಲ್ಲ ಅಥವಾ ಎಲ್ಲಾ ಭಾಷೆಗಳಿಗೂ ವಿವರಣೆಯನ್ನು ತರಿಸಿಕೊಳ್ಳಲು ಅಥವಾ ಅವರನ್ನು ದೀರ್ಘಕಾಲ ಭಂಡಾರಗಳಿಗೆ ಕರೆಸಿ ಇರಿಸಿಕೊಳ್ಳಲು ಸಾಧ್ಯವಿಲ್ಲ ಶಾಸ್ತ್ರಗ್ರಂಥಗಳ ಸೂಚಿಗೆ ಕೇವಲ ಭಾಷೆ ಲಿಪಿ ತಿಳಿದರೆ ಸಾಲದು ಶಾಸ್ತ್ರ ಪರಿಚಯವೂ ಇರಬೇಕಾಗುತ್ತದೆ. ಈ ದಿಸೆಯಲ್ಲಿ ಪ್ರಯೋಗ ನಡೆಸಬಹುದು.

ಹಸ್ತಪ್ರತಿ ಸೂಚಿಗಳನ್ನು ಕಟ್ಟುಗಳ ಪ್ರಕಾರ ಮಾಡುವ ಬದಲು ಮೊದಲು ಏಕ ಪ್ರತಿಗಳನ್ನು ಜೀರ್ಣವಾದ ಪ್ರತಿಗಳನ್ನು ಮಹತ್ವದ ಕೃತಿಗಳನ್ನು ಅಪ್ರಕಟಿತ ಕೃತಿಗಳ ಸೂಚಿಯನ್ನು ಸಿದ್ಧಪಡಿಸಿ ಅನಂತರ ಉಳಿದ ಕೃತಿಗಳ ಸೂಚಿ ಮಾಡಬಹುದು. ತಜ್ಞರ ಸಮಿತಿ ಯಾವುದನ್ನು ಮಾಡಬೇಕು ಎಂಬುದನ್ನು ನಿರ್ಧರಿಸಬೇಕು.

ನಮ್ಮನಾಡಿನಲ್ಲಿ ಇರುವ ಹಸ್ತಪ್ರತಿಗಳ ಸಂಖ್ಯೆ, ಸೂಚಿಮಾಡಲು ಬೇಕಾದ ಜನ

ಕಾಲ ಇವುಗಳನ್ನು ಲೆಕ್ಕ ಹಾಕಿ ಈ ಬಗ್ಗೆ ಯೋಜನೆಯನ್ನು ರೂಪಿಸಬೇಕು ಹಂಪಿ ಕನ್ನಡ ವಿಶ್ವವಿದ್ಯಾಲಯ ಯೋಜಿಸಿರುವಂತೆ ವರ್ಷೇ ವರ್ಷೇ ಪದೇಪದೇ ಹಸ್ತಪ್ರತಿ ವ್ಯಾಸಂಗ ಶಿಬಿರಗಳನ್ನು ಏರ್ಪಡಿಸುವುದು ಅಗತ್ಯವಿದೆ. ಇನ್ನು ಸೂಚೀಕಾರ್ಡುಗಳನ್ನು ಏಕರೂಪವಾಗಿ ಸಿದ್ಧಗೊಳಿಸಿ ಎಲ್ಲ ಹಸ್ತಪ್ರತಿ ಭಂಡಾರಗಳೂ ಒಂದೇ ಸೂಚಿ ಮಾದರಿಯನ್ನು ಬಳಸುವುದು ಅಗತ್ಯವಾಗಿದೆ.

## ಸಂಕೇತಾಕ್ಷರಗಳು ಮತ್ತು ಚಿಹ್ನೆಗಳು:

ಸೂಚೀಕರಣದಲ್ಲಿ ಸಂಕೇತಾಕ್ಷರಗಳನ್ನು ಸಂಕೇತ ಚಿಹ್ನೆಗಳನ್ನು ಬಳಸುತ್ತೇವೆ. ಈ ಬಗ್ಗೆ ಏಕರೂಪ ಬಳಕೆ ಇಲ್ಲದನ್ನು ಕಾಣುತ್ತೇವೆ. ಉದಾಹರಣೆಗೆ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಸೂಚಿಯಲ್ಲಿ ಸಂಕೇತಾಕ್ಷರಗಳು ತಾಳೆಗರಿ ಪ್ರತಿ=ತಾಪ್ರ ಎಂದು ಬಳಸಿದರೆ ಮತ್ತು ಕೆಲವು ಓಪ್ರ+ಓಲೆಗರಿ ಪ್ರತಿ ಎಂದಿದ್ದಾರೆ. ದಪ್ಪು ಕಪ್ಪು ಚುಕ್ಕೆಯನ್ನು ಕೃತಿ ವಿವರ ಪ್ರತಿವಿವರಗಳನ್ನು ಪ್ರತ್ಯೇಕಿಸಲು ಕನ್ನಡ ವಿಶ್ವವಿದ್ಯಾನಿಲಯದ ಹಸ್ತಪ್ರತಿ ಸೂಚಿಯಲ್ಲಿ ಬಳಸಿದ್ದಾರೆ, ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಸೂಚಿಯಲ್ಲಿ ಕಟ್ಟಿನಲ್ಲಿರುವ ಪ್ರತಿಗಳ ವಿವರಕ್ಕೆ ಕಪ್ಪುಚುಕ್ಕೆ ಬಳಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸೂಚಿಯಲ್ಲಿ ಕನಿಷ್ಠ ಉತ್ತಮ ಮಧ್ಯಮ ಮಾತುಗಳನ್ನು ಬಳಸಿದರೆ ಉತ್ತಮ ಸಾಧಾರಣ ಎಂಬ ಎರಡೇ ಮಾತನ್ನು ಕನ್ನಡ ಅಧ್ಯಯನ ಪೀಠದ ಸೂಚಿಗಳಲ್ಲಿ ಬಳಸಿದೆ.

ಬೆಂವಿವಿ ಹಸ್ತಪ್ರತಿ ವರ್ಣನಾತ್ಮಕ ಸೂಚಿಯಲ್ಲಿ ಪಂಕ್ತಿ ಎಂಬ ಮಾತನ್ನು ಬಳಸಿದರೆ ಸಾಲು ಎಂಬ ಪದವನ್ನು ಕನ್ನಡ ಅಧ್ಯಯನ ಪೀಠದ ಸೂಚಿಯಲ್ಲಿ ಬಳಸಿದೆ. ವಿಷಯವೆಂಬ ಶೀರ್ಷಿಕೆ ಕೊಟ್ಟರೆ ಪ್ರಾಚ್ಯ ವಿದ್ಯಾಸಂಶೋಧನಾಲಯದ ಸೂಚಿಯಲ್ಲಿ ವಿಷಯವೆಂಬ ಶೀರ್ಷಿಕೆ ಇಲ್ಲದೆ ವಿಷಯವನ್ನು ಮೇಲ್ಭಾಗದಲ್ಲಿ ನಾಗನೂರು ರುದ್ರಾಕ್ಷಿ ಮಠದ ಹಸ್ತಪ್ರತಿ ಸೂಚಿಯಲ್ಲಿ ಕೊಟ್ಟಿದೆ. ಇದರರ್ಥ ಸರಿ ತಪ್ಪಿನ ಪ್ರಶ್ನೆ ಅಲ್ಲ ಏಕರೂಪತೆ ಇಲ್ಲ ಎಂಬುದನ್ನು ಗಮನಿಸಬೇಕು ಒಟ್ಟಿನಲ್ಲಿ ಪಾರಿಭಾಷಿಕ ಪದಗಳು ಮತ್ತು ಸಂಕೇತಾಕ್ಷರಗಳು ಹಾಗೂ ಲೇಖನ ಚಿಹ್ನೆಗಳನ್ನು ಬಳಸುವಲ್ಲಿ ಒಂದು ಶಿಷ್ಟರೂಪ(ಸ್ಟ್ಯಾಂಡರ್ಡ್ ಫಾರಂ) ಬಳಸುವುದು ಉಚಿತ. ಹಸ್ತಪ್ರತಿ ಸೂಚಿ ಮಾಡಲು ಆಧಾರಪ್ರಾಯವಾದುದು ಹಸ್ತಪ್ರತಿ. ಹಸ್ತಪ್ರತಿಗಳು ನಿರ್ದಿಷ್ಟ ಭಾಷೆ ಮತ್ತು ಲಿಪಿಯನ್ನು ಒಳಗೊಂಡಿರುತ್ತದೆ. ಹಸ್ತಪ್ರತಿಯನ್ನು ಓದಿ ಅರ್ಥಮಾಡಿಕೊಳ್ಳಲು ಭಾಷೆಯ ಪರಿಚಯವೂ ಇರಬೇಕು, ಲಿಪಿಯು ಪರಿಚಯವೂ ಇರಬೇಕು ಭಾಷೆ ತಿಳಿದಿದ್ದು ಲಿಪಿಗೊತ್ತಿದ್ದರೆ, ಲಿಪಿಗೊತ್ತಿದ್ದು ಭಾಷೆ ತಿಳಿಯದಿದ್ದರೆ ಹಸ್ತಪ್ರತಿ ಅಧ್ಯಯನ ಪರಿಚಯ ಸಾಧ್ಯವಿಲ್ಲ ಉದಾಹರಣೆಗೆ ಸಂಸ್ಕೃತ ಗ್ರಂಥವೊಂದು ಕನ್ನಡ ಲಿಪಿಯಲ್ಲಿ ಇದ್ದಾಗ ಓದಬಹುದು

ಆದರೆ ಸಂಸ್ಕೃತ ಭಾಷೆ ತಿಳಿಯದಿದ್ದಾಗ ಗ್ರಂಥ ಅರ್ಥವಾಗುವುದಿಲ್ಲ ಹಾಗೆಯೇ ಕನ್ನಡ ಗ್ರಂಥವೊಂದನ್ನು ಉದಾಹರಣೆಗೆ ಪುರಂದರದಾಸರ ಕೀರ್ತನೆಗಳು ದೇವನಾಗರಿ ಲಿಪಿಯಲ್ಲಿ ಇದ್ದಾಗ ಭಾಷೆ ತಿಳಿದಿದ್ದರೂ ಲಿಪಿಯಕಾರಣ ಓದಲಾಗುವುದಿಲ್ಲ ಆದ್ದರಿಂದ ಹಸ್ತಪ್ರತಿಯ ವಿವರಗಳನ್ನು ತಿಳಿಯಲು ಭಾಷೆ ಲಿಪಿ ಎರಡೂ ಅವಶ್ಯಕವಿದೆ.

ಇನ್ನೂ ಭಾಷೆ ಮತ್ತು ಲಿಪಿಗಳು ಶತಮಾನಗಳಿಂದ ಬೆಳೆದುಬಂದು ಅದಕ್ಕೆ ಅದರದೇ ಇತಿಹಾಸವಿರುತ್ತದೆ. ಕನ್ನಡ ಭಾಷೆಯಲ್ಲಿ ಪೂರ್ವದ ಹಳೆಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಅವಸ್ಥಾಂತರಗಳನ್ನು ಕಾಣುತ್ತೇವೆ. ಹಳಗನ್ನಡದ ವ್ಯಾಕರಣಕ್ಕೂ ಹೊಸಗನ್ನಡ ವ್ಯಾಕರಣಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ. ಜತೆಗೆ ಹಳಗನ್ನಡ ಲಿಪಿಯೂ ಹೊಸಗನ್ನಡ ಲಿಪಿಯೂ ವ್ಯತ್ಯಾಸಗಳಿವೆ ಭಾಷೆ ಮತ್ತು ಲಿಪಿ ಎರಡೂ ಕಾಲಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿದೆ ಈ ಕಾರಣದಿಂದ ಹಸ್ತಪ್ರತಿ ಓದಿಗೆ, ಭಾಷಾವಿಕಾಸದ ಹಿನ್ನೆಲೆಯಲ್ಲಿ ವ್ಯಾಕರಣ ಛಂದಸ್ಸು ಮತ್ತು ಲಿಪಿ, ಭಾಷಾ ಅಧ್ಯಯನ ಬೇಕಾಗುತ್ತದೆ. ಹಸ್ತಪ್ರತಿಯ ಕಾಲನಿರ್ಧಾರಕ್ಕೂ ಈ ಲಿಪಿ, ಭಾಷಾ ಅಧ್ಯಯನ ನೆರವಾಗುತ್ತದೆ. **ಉದಾಹರಣೆಗೆ** ಐ/ಜ ಪ್ರಯೋಗ ಇರುವ ಪ್ರತಿ ಇಲ್ಲದ ಪ್ರತಿಕಂಡಾಗ, ಐ/ಜ ಪ್ರಯೋಗದ ಪ್ರತಿ ಪ್ರಾಚೀನವೆಂದು ನಿರ್ಧರಿಸಬಹುದು. ಕನ್ನಡ ಲಿಪಿವಿಕಾಸದ ಇತಿಹಾಸ ಗೊತ್ತಿದ್ದಾಗ ಹಸ್ತಪ್ರತಿ ಪ್ರಾಚೀನತೆ ಹಿನ್ನೆಲೆಯಲ್ಲಿ ಕೃತಿಯ ಕಾಲ ನಿರ್ಧರಿಸಲು ನೆರವು ಸಿಗುತ್ತದೆ. ಆದಕಾರಣ ಹಸ್ತಪ್ರತಿ ಸೂಚಿ ರಚನೆಗೆ ಮೊದಲ ಸಿದ್ಧತೆ ಎಂದರೆ ಹಸ್ತಪ್ರತಿಯ ಭಾಷೆ ಲಿಪಿಯ ಪರಿಚಯ ಇರುವುದೇ ಆಗಿದೆ.

---

## ಅಡಿಟಿಪ್ಪಣಿಗಳು

1. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿ ಶಾಸ್ತ್ರ.(ಪು–88)

2. ಮಧುವೆಂಕಾರೆಡ್ಡಿ–ಹಸ್ತಪ್ರತಿವ್ಯಾಸಂಗ ಹ.ಭಂಡಾರಗಳ ಅಪೂರ್ವತೆ.
ಹಸ್ತಪ್ರತಿ ವ್ಯಾಸಂಗ–2 ಕ.ವಿ.ವಿ.ಹಂಪಿ. (ಪು–44)

3. ಟಿ.ವಿ.ಸುಬ್ರಹ್ಮಣ್ಯಂ–ಗ್ರಂಥಸೂಚಿಯ ವಿನ್ಯಾಸ.(ಪು–37) 1970 ಮೈ.ವಿ.ವಿ.ಪ್ರಕಟಣ
,

4. ಟಿ.ವಿ.ಸುಬ್ರಹ್ಮಣ್ಯಂ–ಗ್ರಂಥಸೂಚಿಯ ವಿನ್ಯಾಸ.(ಪು–37)

5. ಗ್ರಂಥಸೂಚಿ 'ಎಂದರೇನು'? ಎಂಬುದನ್ನು ಕನ್ನಡ ಗ್ರಂಥಸೂಚಿ–(1) ಪ್ರ. ಮೈಸೂರು ವಿಶ್ವವಿದ್ಯಾಲಯ. 1971 ಇದರ ಮುನ್ನುಡಿಯಲ್ಲಿ ಹೀಗೆ ವಿವರಿಸಿದೆ.

"ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ. ಆ ನಿರೂಪಣೆ ಲೇಖನ, ಕೃತಿ, ಕಾಗದ, ಶಾಯಿ, ಅಲಂಕಾರ, ಅಚ್ಚುಮೊಳೆಯ ಮಾದರಿ, ರಟ್ಟಿನ ಬಗೆ ಈ ಯಾವುದನ್ನೇ ಕುರಿತಿದ್ದಾಗಿರಬಹುದು. ಕೊನೆಗೆ ಮುದ್ರಕರು ಬಳಸುವ ಸಂಕೇತಗಳು ಕಾಗದ ತಯಾಕರು ಹಾಕುವ ಜಲಚಿಹ್ನೆ (ವಾಟರ್ ಮಾರ್ಕ್) ಕೂಡ ಆಗಬಹುದು".

"ಒಂದು ಕೃತಿಯ ಪ್ರಕಟನವರ್ಷ, ಸ್ಥಳ, ಆವೃತ್ತಿ, ಪುಟಸಂಖ್ಯೆ ಆಕಾರ, ಇತ್ಯಾದಿ ಸಂಗತಿಗಳೂ ಆಗಬಹುದು. ಸಂಶೋಧಕನಿಗೆ ಒಂದಿಲ್ಲ ಒಂದು ರೀತಿಯಲ್ಲಿ ಅಮೂಲ್ಯವೆನಿಸುವ ಈ ಅಂಶಗಳನ್ನು ಸಂಗ್ರಹಿಸಿ ಶಾಸ್ತ್ರೀಯವಾಗಿ ವಿಭಾಗಿಸಿ, ವ್ಯವಸ್ಥೆಗೊಳಿಸಿ ಪ್ರಕಟಿಸುತ್ತದೆ ಗ್ರಂಥಸೂಚಿ."

6. ಗ್ರಂಥಸೂಚಿಯ ಬಗೆಗಳು ಅಧ್ಯಾಯ 3 ರಲ್ಲಿ ಹೀಗೆ ಹೇಳಿದೆ.

"ಉದ್ದೇಶಕ್ಕೆ ತಕ್ಕಂತೆ ಒಂದೋ ಹಲವು ಅಂಶಗಳನ್ನು ಒಳಗೊಂಡು ಗ್ರಂಥಸೂಚಿಯ ಬೇರೆ ಬೇರೆ ಬಗೆಗಳಾಗುತ್ತವೆ. ಹಾಗೆಯೇ ಅದು ಒಂದು ವಿಷಯಕ್ಕೆ ಮಿತಗೊಂಡು **'ಏಕವಿಷಯಸೂಚಿ'** ಯಾಗಬಹುದು.

ಒಬ್ಬ ಲೇಖಕನ ಕೃತಿಗಳಿಗೆ ಸೀಮಿತಗೊಂಡು **'ಏಕಕರ್ತೃಸೂಚಿ'** ಯಾಗಬಹುದು ಕೃತಿಯ ಬಾಹ್ಯ ಅಂಶಗಳನ್ನು ಪಟ್ಟಿ ಮಾಡುವುದರ ಜೊತೆಗೆ ಅದರ ಸ್ಥೂಲವಾದ ವರ್ಣನೆಗೂ ತೊಡಗಿ, **'ವರ್ಣನಾತ್ಮಕಸೂಚಿ'** ಆಗಬಹುದು. ಹೀಗೆಯೇ

**'ವ್ಯವಸ್ಥಾತ್ಮಕಸೂಚಿ' 'ಪಾಠನಿರ್ಣಯಸೂಚಿ'** ಇತ್ಯಾದಿ ಪ್ರಭೇದಗಳೂ ಇವೆ'' (ಕನ್ನಡ ಗ್ರಂಥಸೂಚಿ ಭಾಗ (1) 1971 ಮೈ.ವಿ.ವಿ.ಪ್ರಸಾರಾಂಗ)

7. ಟಿ.ವಿ.ಸುಬ್ರಹ್ಮಣ್ಯಂ–ಗ್ರಂಥಸೂಚಿಯ ವಿನ್ಯಾಸ.(ಪು–59)
8. ಟಿ.ವಿ.ಸುಬ್ರಹ್ಮಣ್ಯಂ–ಗ್ರಂಥಸೂಚಿಯ ವಿನ್ಯಾಸ.(ಪು–62–63)
9. ಟಿ.ವಿ.ಸುಬ್ರಹ್ಮಣ್ಯಂ–ಗ್ರಂಥಸೂಚಿಯ ವಿನ್ಯಾಸ.(ಪು–59)
10. ಎನ್.ಶಿವಣ್ಣ–ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ ಪು–821 8 ಮೈ.ವಿ.ವಿ. ಪ್ರಸಾರಾಂಗ.
11. ಜಿಗ್ಲರ್–ಕ–ಇಂ.ಡಿಕ್ಸನರಿ (ಪು.291)
12. ಜಿ.ವೆಂಕಟಸುಬ್ಬಯ್ಯ–ಕನ್ನಡ ಶಬ್ದಕೋಶ ಪ್ರಿಸಂ ಪ್ರಕಟನೆ
13. ಅಕ್ಸ್‌ಫರ್ಡ್ ಆಡ್ವಾನ್ಸ್‌ಡ್ ಲರ್ನ್‌ರ್ಸ್ ಡಿಕ್ಷನರಿ–(ಪು–759–1994
14. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–104)
15. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–106)
16. ಬಿ.ಎಂ.ಶ್ರೀ–ಹಸ್ತಪ್ರತಿಶಾಸ್ತ್ರ (ಪು–76)
17. ನಾ.ಗೀತಾಚಾರ್ಯ–ಹಸ್ತಪ್ರತಿಶಾಸ್ತ್ರ ವಿವೇಚನೆ (ಪು–39–40)
18. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–109)
19. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–109)
20. ಕನ್ನಡ ವಿಶ್ವವಿದ್ಯಾಲಯ–ಸಂಪುಟ 3(ಪು–8) ಹಸ್ತಪ್ರತಿಸೂಚಿ
21. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–89–98)
22. ಎಸ್.ಶಿವಣ್ಣ–ಬಿ.ಎಂ.ಶ್ರೀ. ಹಸ್ತಪ್ರತಿಶಾಸ್ತ್ರ (ಪು–70–72)
23. ಎಂ.ಎಂ.ಕಲಬುರ್ಗಿ–ಕನ್ನಡ ಹಸ್ತಪ್ರತಿಶಾಸ್ತ್ರ.(ಪು–105)
24. ಹಸ್ತಪ್ರತಿ ವ್ಯಾಸಂಗ–ಕನ್ನಡ ವಿ.ವಿ.ಹಂಪಿ ಸಂಪುಟ–2

---

# ಅಧ್ಯಾಯ -4

# ಕನ್ನಡ ಸಂಶೋಧನ ಸಂಸ್ಥೆಯ ಕನ್ನಡ ಹಸ್ತಪ್ರತಿ ಸೂಚಿಗಳು

## ಇತಿಹಾಸ:

ಉತ್ತರಕರ್ನಾಟಕದ ಯುವಜನರಿಗೆ ಉನ್ನತ ಶಿಕ್ಷಣದ ಸಮೃದ್ಧವಾದ, ವೈವಿಧ್ಯಮಯವಾದ ಸೌಲಭ್ಯಗಳನ್ನು ಒದಗಿಸುವ ಉದಾತ್ತ ಉದ್ದೇಶ ಹೊಂದಿ ತನ್ಮೂಲಕ ಅವರ ಭಾಗ್ಯದ ಬಾಗಿಲು ತೆರೆದ ವಾಗ್ದೇವಿಯ ರೂಪತಾಳಿ ಕರ್ನಾಟಕ ವಿಶ್ವವಿದ್ಯಾಲಯ 1949 ರಲ್ಲಿ ಅಸ್ತಿತ್ವಕ್ಕೆ ಬಂದಿತು.[1]

ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆ ಒಂದು ಘಟ್ಟವಾದರೆ ವಿಶ್ವವಿದ್ಯಾನಿಲಯದ ಕಟ್ಟಡ ವಿದ್ಯಾಸೌಧ ನಿರ್ಮಾಣ ಇನ್ನೊಂದು ಸಾಧನೆ. ಕರ್ನಾಟಕದ ವಿಶ್ವವಿದ್ಯಾನಿಲಯಗಳ ಕಟ್ಟಡಗಳಲ್ಲಿ ಅತಿಸುಂದರ ಕಟ್ಟಡಗಳಲ್ಲಿ ಒಂದು ವಿದ್ಯಾಸೌಧ.

" ಈ ವಿದ್ಯಾಸೌಧದಲ್ಲಿ ಮಧ್ಯವರ್ತಿ ವಿಶಾಲವಾದ ಭಾಗದಲ್ಲಿ ನೆಲೆಗೊಂಡು ತನ್ನ ಅಮೂಲ್ಯ ಹಸ್ತಪ್ರತಿಗಳ ಸಂಗ್ರಹದಿಂದ ಮತ್ತು ಪುರಾತನವಸ್ತುಗಳ ಆಕರ್ಷಿತ ಪ್ರದರ್ಶನ ಮಾಡಿದರಿಂದ ಪಂಡಿತ ಪಾಮರರ ಕಣ್ಮನ ಸೆಳೆಯುವ ವಿದ್ಯೆಯ ಹಾಗೂ ಸಂಶೋಧನೆಯ ಆಗರವಾಗಿ ವಿಕಸಿತಗೊಂಡ ಸಂಸ್ಥೆ ಎಂದರೆ 1937ರಲ್ಲಿ ಸ್ಥಾಪಿತವಾದ ಕನ್ನಡ ಸಂಶೋಧನ ಸಂಸ್ಥೆ."[2]

ಮೈಸೂರಿನಲ್ಲಿ 1891ರಲ್ಲಿ ಸ್ಥಾಪನೆ ಆದ ಓರಿಯಂಟಲ್ ಲೈಬ್ರರಿಯನ್ನು ಮೈಸೂರಿನ ಮಹಾರಾಜರಾದ ಚಾಮರಾಜ ಒಡೆಯರ್ ಅವರು ಸ್ಥಾಪಿಸಿದರು. ಇದು 1943ರಲ್ಲಿ ಓರಿಯಂಟಲ್ ರಿಸರ್ಚ್‌ಇನ್‌ಸ್ಟಿಟ್ಯೂಟ್ (ಪ್ರಾಚ್ಯ ವಿದ್ಯಾಸಂಶೋಧನಾಲಯ) ಅಧಿಕೃತ ಸಂಶೋಧನಾ ಸಂಸ್ಥೆಯಾಗಿ ಪರಿವರ್ತಿತವಾಯಿತು. 1969ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಇದರ ಕನ್ನಡಹಸ್ತಪ್ರತಿ ವಿಭಾಗ ಸೇರಿಕೊಂಡಿತು.

ಈ ಸಂಸ್ಥೆ ಕರ್ನಾಟಕದಲ್ಲಿ ಸರ್ಕಾರದಿಂದ ಸ್ಥಾಪಿತವಾದ ಮೊದಲ ಅಧಿಕೃತ ಹಸ್ತಪ್ರತಿ ಸಂಗ್ರಹ-ಸಂಪಾದನಾ ಸಂಸ್ಥೆ ಆಗಿದೆ. ಇದಾದಮೇಲೆ ಉತ್ತರಕರ್ನಾಟಕದಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಸಂಸ್ಥೆ ಕನ್ನಡ ಸಂಶೋಧನ ಸಂಸ್ಥೆಯೇ ಎರಡನೆಯ ಸಂಸ್ಥೆ. ಈ ಸಂಸ್ಥೆಯನ್ನು ಮುಂಬೈ ಸರ್ಕಾರ ಆ ಭಾಗದ ಹಲವು ಪ್ರಮುಖ ವಿದ್ವಾಂಸರ

ಬೇಡಿಕೆಯಂತೆ 1938ರಲ್ಲಿ ಸ್ಥಾಪಿಸಿತು. ಪ್ರಸಿದ್ಧ ಸಂಶೋಧಕರಾದ ಆರ್.ಎಸ್.ಪಂಚಮುಖಿ ಅವರು ಈ ಸಂಸ್ಥೆಯ ಸ್ಥಾಪನೆಗೆ ಶ್ರಮಿಸಿದವರಲ್ಲಿ ಮುಖ್ಯರಾಗಿದ್ದಾರೆ. ಅವರೇ ಈ ಸಂಸ್ಥೆಯ ಮೊದಲ ನಿರ್ದೇಶಕರಾಗಿ ನೇಮಕಗೊಂಡರು ಅನಂತರ ಬಿ.ಎ.ಸಾಲತೊರೆ, ಬಿ.ಎಸ್.ಕುಲಕರ್ಣಿ, ಡಾ.ಎಂ.ಎಂ. ಕಲಬುರ್ಗಿ ಎಂಬ ಕೊಟ್ರಶೆಟ್ಟಿ ಎಸ್.ಎಂ.ವೃಷಭೇಂದ್ರಸ್ವಾಮಿ ಮೊದಲಾದವರು ಕಾರ್ಯನಿರ್ವಾಹಕ ನಿರ್ದೇಶಕರಾಗಿ ಶ್ರಮಿಸಿದ್ದಾರೆ. ಈ ಸಂಸ್ಥೆಯಲ್ಲಿ 3000ಕ್ಕೂ ಅಧಿಕ ಹಸ್ತಪ್ರತಿಗಳಿವೆ. 14 ಹಸ್ತಪ್ರತಿಸೂಚಿಗಳನ್ನು ಸಿದ್ಧಪಡಿಸಿ ಪ್ರಕಟಿಸಿದ ಈ ಸಂಸ್ಥೆಯಿಂದ ಕವಿಜಿಹ್ವಾಬಂಧನ, ಸಮಯಪರೀಕ್ಷೆಗಳಂಥ ಅಪೂರ್ವ ಗ್ರಂಥಗಳನ್ನು ಹಸ್ತಪ್ರತಿಗಳಿಂದ ಸಂಪಾದಿಸಿ ಪ್ರಕಟಿಸಿದೆ.

" ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಪ್ರಾರಂಭವಾಗಿ ಕನ್ನಡ ಅಧ್ಯಯನ ಪೀಠವಲ್ಲಿ ವ್ಯವಸ್ಥಿತವಾದ ಹಸ್ತಪ್ರತಿ ವಿಭಾಗದ ಚಟುವಟಿಕೆ ಆರಂಭವಾದ ಮೇಲೆ ಇದರ ಚಟುವಟಿಕೆ ಕುಂಠಿತವಾಯಿತು"[2]. ಡಾ.ಎಂ.ಎಂ.ಕಲಬುರ್ಗಿ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ನಿರ್ದೇಶಕರಾಗಿದ್ದಾಗ ಅವರ ಪ್ರಯತ್ನದ ಫಲವಾಗಿ 1992ರಲ್ಲಿ ಸಂಶೋಧನ ಸಂಸ್ಥೆಯ ಎಲ್ಲಾ ಹಸ್ತಪ್ರತಿಗಳನ್ನು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ವಿಭಾಗಕ್ಕೆ ಸೇರಿಸಲಾಯಿತು ಆನಂತರ ಈ ಸಂಸ್ಥೆ ಸ್ಥಗಿತವಾಯಿತು.

### ಪ್ರಕಟಿತ 13 ಸಂಪುಟಗಳ ವಿಷಯ:



1953ರಲ್ಲಿ ಮೊದಲ ಸಂಪುಟ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿಸೂಚಿ ಪ್ರಕಟವಾಯಿತು 1990ರಲ್ಲಿ 13ನೆಯ ಸಂಪುಟ ಪ್ರಕಟವಾಯಿತು. 14ನೇ ಸಂಪುಟ ಸಿದ್ಧವಾದರೂ ಪ್ರಕಟವಾಗಿಲ್ಲ. ಈ 13 ಸಂಪುಟಗಳೂ ವಿವರ ಹೀಗಿದೆ.

1. ಪಂಚಮುಖಿ ಆರ್. ಎಸ್. – 1953
   ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿ ಸಂ–01
   ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
   ವಿಷಯ:– ಈ ಸಂಪುಟದಲ್ಲಿ 57 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ಪುರಾಣ, ಧರ್ಮ, ಮತ್ತು ಧರ್ಮಶಾಸ್ತ್ರವು. ಜೈನ, ವೀರಶೈವ, ವೈದಿಕ, ಮತಗಳ, ಗ್ರಂಥಗಳ ವಿವರಣೆಯಿದೆ.

2. ಮಾಳವಾಡ. ಎಸ್. ಎಸ್. – 1955
   ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–02

ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 44 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ಶಿವಶರಣರ ವಚನಗಳು, ಮತ್ತು ಕನಕದಾಸರ ಮೋಹನತರಂಗಿಣಿ, ಮತ್ತು ಕುಮಾರವ್ಯಾಸಭಾರತ, ಮಹಾಕೂಟದಮಹಾತ್ಮೆ, ವಶಿಷ್ಠವಿಶ್ವಾಮಿತ್ರ ಸಂವಾದ, ಷಡಕ್ಷರಮಂತ್ರದ ಮಹಿಮೆ, ಇನ್ನೂ ಮುಂತಾದ ಗ್ರಂಥಗಳ ವಿವರಣೆಯಿದೆ.

3. ಕುಲಕರ್ಣಿ. ಬಿ. ಎಸ್. – 1957
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ–03
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 48 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ವೀರಶೈವ, ಧರ್ಮತತ್ವ, ಯಕ್ಷಗಾನ, ಪಂಚತಂತ್ರ, ಜ್ಯೋತಿಷ್ಯ, ಗಣಿತಶಾಸ್ತ್ರ, ವ್ಯಾಕರಣ ಛಂದಸ್ಸುಗಳ, ಗ್ರಂಥಗಳ ವರ್ಣನೆಯಿದೆ.

4. ಅಣ್ಣಿಗೇರಿ ಎ. ಎಮ್. – 1961.
ಕನ್ನಡ ಪ್ರಾಚೀನ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ–04
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 75 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ಪ್ರಭುದೇವರಪುರಾಣದ ನಾಂದ್ಯೆ, ಮಹಾಭಾರತದ ಕಥೆ, ಯಕ್ಷಗಾನ, ಹಯಶಾಸ್ತ್ರ, ರಾಮಾಯಣ ಮುಂತಾದ ವಿಷಯದ ಗ್ರಂಥಗಳ ವಿವರಣೆಯಿದೆ.

5. ದೇಸಾಯಿ ಪಿ. ಬಿ. – 1964
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–05
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 80 ಗ್ರಂಥಗಳ ವಿಷಯದ ವಿವರಣೆಯಿದೆ ಇದರಲ್ಲಿ ಜ್ಯೋತಿಷ್ಯ, ನಿಘಂಟು, ಜೈನಧರ್ಮತತ್ವ, ಸಂಗೀತ, ನಾಟ್ಯಶಾಸ್ತ್ರ, ಮತ್ತು ವೀರಶೈವಧರ್ಮತತ್ವಗಳ ಗ್ರಂಥಗಳ ವಿವರಣೆಯಿದೆ.

6. ದೇಸಾಯಿ ಪಿ. ಬಿ. – 1965
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–06
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.

ವಿಷಯ:– ಈ ಸಂಪುಟದಲ್ಲಿ 85 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ವೀರಶೈವ, ಜೈನ, ವೈಷ್ಣವಧರ್ಮತತ್ವ ಗ್ರಂಥಗಳು, ಇತಿಹಾಸ, ಯಕ್ಷಗಾನ ಅಲಂಕಾರ, ಮತ್ತು ಸಂಸ್ಕೃತ ಕನ್ನಡಕ್ಕೆ ಅನುವಾದಿಸಿದ ಅಮರುಕ ಗ್ರಂಥ ಹೀಗೆ ಅನೇಕ ಪ್ರಮುಖ ವಿಷಯದ ಗ್ರಂಥಗಳ ವಿವರಣೆಯಿದೆ.

7. ದೇಸಾಯಿ ಪಿ. ಬಿ. – 1967
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–07
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 83 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ವೀರಶೈವಧರ್ಮತತ್ವ, ಮತ್ತು ಷಟ್‌ಸ್ಥಲಸಿದ್ಧಾಂತದ ನಿರೂಪಣೆ, ಮತ್ತು ಜೈನಧರ್ಮತತ್ವ, ರಾಮಾಯಣದ ಗ್ರಂಥಗಳ ವಿವರಣೆಯಿದೆ.

8. ದೇಸಾಯಿ ಪಿ. ಬಿ. – 1968
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–08
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 78 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ವೀರಶೈವಧರ್ಮ, ಜೈನಧರ್ಮಸಾಹಿತ್ಯ, ವೈಷ್ಣವಧರ್ಮ, ಮತ್ತು ರಾಮಾಯಣ, ವೈದ್ಯಕೀಯ, ಕನ್ನಡಧಾತುಗಳು, ಈ ಗ್ರಂಥಗಳ ವಿವರಣೆಯಿದೆ.

9. ದೇಸಾಯಿ ಪಿ. ಬಿ. – 1970
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ–09
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:– ಈ ಸಂಪುಟದಲ್ಲಿ 72 ಗ್ರಂಥಗಳ ವಿವರಣೆಯಿದೆ. ಕಾವ್ಯ, ಪುರಾಣ, ಶಾಸ್ತ್ರ, ಮತ್ತು ವೀರಶೈವ, ಜೈನ, ವೈಷ್ಣವ, ಧರ್ಮಗಳಿಗೆ ಸಂಬಂಧಿಸಿದಂತೆ ಮತ್ತು ರಾಮಾಯಣ, ಭಾಗವತ, ಮಹಾಭಾರತ, ಪುರಾಣಗಳ ಗ್ರಂಥಗಳ ವಿವರಣೆಯಿದೆ.

10. ಕುಲಕರ್ಣಿ. ಬಿ. ಎಸ್. – 1976
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ–10
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.

ವಿಷಯ:- ಈ ಸಂಪುಟದಲ್ಲಿ 51 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ಕಾವ್ಯ, ಪುರಾಣ, ಶಾಸ್ತ್ರ, ತತ್ವ, ಶಾಸನ, ಕೈಫಿಯತ್ತು, ಕಾಲಜ್ಞಾನ, ಜ್ಯೋತಿಷ್ಯ, ಗಣಿತ, ಜಾನಪದಹಾಡು, ಮತ್ತು ವೀರಶೈವ, ವೈದಿಕಧರ್ಮತತ್ವಗಳು ಮುಂತಾದ ವಿಷಯಗಳ ಗ್ರಂಥಗಳ ವಿವರಣೆಯಿದೆ.

11. ಕುಲಕರ್ಣಿ. ಬಿ. ಎಸ್. - 1982
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ-11
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:- ಈ ಸಂಪುಟದಲ್ಲಿ 68 ಗ್ರಂಥಗಳ ವಿವರಣೆಯಿದೆ. ಇದರಲ್ಲಿ ಕಾವ್ಯ, ಪುರಾಣ, ಶಾಸ್ತ್ರ, ವೈದ್ಯಕೀಯತತ್ವ, ಶಾಸನ, ಕೈಫಿಯತ್ತು, ಕಾಲಜ್ಞಾನ, ಜ್ಯೋತಿಷ್ಯ, ಗಣಿತ, ಜಾನಪದಹಾಡುಗಳ, ಗ್ರಂಥಗಳ ವಿವರಣೆಯಿದೆ.

12. ಕುಲಕರ್ಣಿ. ಬಿ. ಎಸ್. - 1983
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ-12
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
ವಿಷಯ:- ಈ ಸಂಪುಟದಲ್ಲಿ 65 ಹಸ್ತಪ್ರತಿಗಳ ವಿವರಣಾತ್ಮಕ ಟಿಪ್ಪಣಿಗಳು ಸಮಾವೇಶಗೊಂಡಿವೆ. ಇದರಲ್ಲಿ ಕಾವ್ಯ, ಪುರಾಣ, ಶಾಸ್ತ್ರ, ವೈದ್ಯಕೀಯತತ್ವ, ಕಾಲಜ್ಞಾನ, ಜ್ಯೋತಿಷ್ಯ, ವೀರಶೈವ, ವೈದಿಕ, ಜೈನಧರ್ಮತತ್ವಗಳು ನಿರೂಪಣೆಯಾಗಿವೆ.

13. ವೃಷಭೇಂದ್ರಸ್ವಾಮಿ. ಎಸ್. ಎಂ. - 1990
ಪ್ರಾಚೀನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ-13
ಕನ್ನಡ ಸಂಶೋಧನ ಸಂಸ್ಥೆ. ಧಾರವಾಡ.
ವಿಷಯ:- ಈ ಸಂಪುಟದಲ್ಲಿ 82 ಹಸ್ತಪ್ರತಿಗಳ ವಿವರಣಾತ್ಮಕ ಟಿಪ್ಪಣಿಗಳು ಸಮಾವೇಶಗೊಂಡಿವೆ. ಕಾವ್ಯ, ಶಾಸ್ತ್ರತತ್ವ, ಜ್ಯೋತಿಷ್ಯ, ಗಣಿತ, ಜಾನಪದ, ಜೈಮಿನಿಭಾರತದ ಕಥೆ, ವಾರಫಲ, ಜೈನಪೂಜಾವಿಧಾನ, ಜ್ಯೋತಿಷ್ಯ, ನಕ್ಷತ್ರಫಲ, ತರ್ಕಶಾಸ್ತ್ರ, ಮುಂತಾದ ಗ್ರಂಥಗಳ ವಿವರಣೆಯಿದೆ.

ಈಗ ಈ ಸಂಪುಟಗಳಲ್ಲಿರುವ ಸೂಚಿಯ ವಿವಿಧಾಂಶಗಳನ್ನು ಪರಿಶೀಲಿಸಬಹುದು.

**ಶೀರ್ಷಿಕೆ ಪುಟ:**

13 ಸಂಪುಟಗಳ ಶೀರ್ಷಿಕೆ ಪುಟಗಳಲ್ಲಿ ( ಟೈಟಲ್ ಪೇಜ್) ಸಂಪುಟ(1) ರಿಂದ (10) ಸಂಪುಟಗಳವರೆಗೆ 1967ರವರೆಗೆ ಇಂಗ್ಲಿಷಿನಲ್ಲೇ ಶೀರ್ಷಿಕೆಪುಟ ಇತ್ತು. ಕನ್ನಡ ಹಸ್ತಪ್ರತಿಸೂಚಿಯಲ್ಲಿ ಕನ್ನಡದಲ್ಲಿ ಶೀರ್ಷಿಕೆ ಕೊಡಬೇಕೆಂದೇ ಸಂಪಾದಕರಿಗೆ ಹೊಳೆದಿರಲಿಲ್ಲ 11ನೇ ಸಂಪುಟದ ವೇಳೆಗೆ (1982) ರಲ್ಲಿ ಕನ್ನಡದಲ್ಲೂ ಶೀರ್ಷಿಕೆ ಪುಟ ಕೊಡಲು ಪ್ರಾರಂಭವಾಗಿ ಮುಂದಿನ (12) (13) ನೇ ಸಂಪುಟಗಳಲ್ಲೂ ಮುಂದುವರೆಯಿತು.

**ಶೀರ್ಷಿಕೆ ಪುಟದ ವಿವರಗಳು ಹೀಗಿವೆ.**

ಮೊದಲ 10 ಸಂಪುಟಗಳಲ್ಲೂ ಶೀರ್ಷಿಕೆ ಪುಟದಪೂರ್ತಿ ಇಂಗ್ಲಿಷ್‌ನಲ್ಲಿದೆ.

11ರಿಂದ ಮುಂದಕ್ಕೆ ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲೂ ಇದೆ. ಈ ರೀತಿ ಇದೆ:–

**ಮಾದರಿ ಶೀರ್ಷಿಕೆಪುಟ:**

ಪ್ರಾಚೀನ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ

ಸಂಪುಟ ೧೧

**Descriptive Catalogue of Manuscripts**

**In the**

**Kannada Research Institute**

**Volume XI**

ಸಂಪಾದಕರು

ಡಾ.ಬಿ.ಎಸ್.ಕುಲಕರ್ಣಿ ಎಂ. ಎ. ಪಿಎಚ್.ಡಿ

ನಿರ್ದೇಶಕರು.

ಸಹಾಯಕರು

ಶ್ರೀ. ಸಿ. ಬಿ. ಕಡಕೋಳ. ಎಂ. ಎ. ಡಿಪ್. ಇನ್. ಎಪಿಗ್ರಫಿ

ಶ್ರೀ. ಕೆ. ಪಿ. ಈರಣ್ಣ. ಎಂ. ಎ. ಬಿಎಡ್.

ಕ.ವಿ.ವಿ ಲಾಂಛನಚಿತ್ರ – 1982

ಕನ್ನಡ ಸಂಶೋಧನ ಸಂಸ್ಥೆ – ಧಾರವಾಡ

**kannada Research Institute - Dharwad**

ಪ್ರತಿಸೂಚಿಯಲ್ಲಿ **Remarks** ಎಂಬ ಕಾಲಂ ಅಡಿಯಲ್ಲಿ ಗ್ರಂಥದ ವಿಷಯವನ್ನು ಅತಿ ಸಂಕ್ಷಿಪ್ತವಾಗಿ ಇಂಗ್ಲಿಷಿನಲ್ಲಿ ನಮೂದಿಸಿದ್ದಾರೆ. ಈ ಪರಿಪಾಟ ಉಳಿದವರ ಹಸ್ತಪ್ರತಿಸೂಚಿಗಳಲ್ಲಿ ಕಾಣುವುದಿಲ್ಲ. ಅನ್ಯಭಾಷೀಯ ವಿದ್ವಾಂಸರ ಮಾಹಿತಿಗಾಗಿ ಈ ಕಾಲಂಅನ್ನು ಕೊಟ್ಟಿದೆ ಎಂದು ಭಾವಿಸಬಹುದು. ಈ ದೃಷ್ಟಿಯಿಂದಲೇ ಮುನ್ನುಡಿಯನ್ನು ಸಂಕ್ಷಿಪ್ತವಾಗಿ ಇಂಗ್ಲಿಷಿನಲ್ಲೂ ಕೊಟ್ಟಿದೆ. ಕನ್ನಡದಲ್ಲಿ ಸಾಕಷ್ಟು ವಿವರವಾಗಿ ಇದೆ. ಉಳಿದ ಕನ್ನಡ ಸೂಚಿಗಳಲ್ಲಿ ಇದನ್ನು ಕಾಣುವುದಿಲ್ಲ ಆದರೆ ಬಿ.ಎಂ.ಶ್ರೀ. ಸ್ಮಾರಕ ಸಂಸ್ಥೆಯಲ್ಲಿ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಸಂಪುಟ 1)ರಲ್ಲಿ ಅನುಬಂಧವಾಗಿ ಇಂಗ್ಲಿಷಿನಲ್ಲಿ ವಿವರಗಳನ್ನು ಪಟ್ಟಿ ರೂಪದಲ್ಲಿ ಕೊಡಲಾಗಿದೆ.

**ಅನುಕ್ರಮಣಿಕೆ:**

ಪ್ರತಿಸೂಚಿಯಲ್ಲೂ ಅನುಕ್ರಮಣಿಕೆ ಇದೆ. ಅನುಕ್ರಮಣಿಕೆಯಲ್ಲಿ ಸಂಪುಟದಲ್ಲಿ ವಿವರಗಳನ್ನು ನೀಡಿರುವ ಹಸ್ತಪ್ರತಿಗಳ ಹೆಸರುಗಳ ಪಟ್ಟಿಯನ್ನು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಅಕಾರಾದಿಯಾಗಿ ಕೊಟ್ಟಿದೆ. ಅಂತೆಯೇ ಸಂಪುಟದಲ್ಲಿ ಉಲ್ಲೇಖಿತ ಗ್ರಂಥಗಳ ಗ್ರಂಥ ಕರ್ತರ ಪಟ್ಟಿಯನ್ನು ಅಕಾರಾದಿಯಾಗಿ ಕೊಡಲಾಗಿದೆ.

**ಸಂಪುಟದಅಂತ್ಯಭಾಗ:**

ಎಲ್ಲಸಂಪುಟಗಳೂ ಗ್ರಂಥವೊಂದರ ವರ್ಣನಾತ್ಮಕ 'ವಿವರಗಳೊಂದಿಗೆ ಮುಕ್ತಾಯವಾಗುತ್ತವೆ. ಸಾಮಾನ್ಯವಾಗಿ ಇತರ ಹಸ್ತಪ್ರತಿ ಕನ್ನಡ ಗ್ರಂಥಸೂಚಿಗಳಲ್ಲೂ ಇದನ್ನೇ ಕಾಣುತ್ತೇವೆ.[4] ಆದರೆ ಕೆಲವು ಸಂಸ್ಥೆಗಳ ಸೂಚಿಗಳಲ್ಲಿ ಸಂಪುಟದ ಅಂತ್ಯಭಾಗದಲ್ಲಿ ಅನುಬಂಧವಾಗಿ ಹಲವು ಅಕಾರಾದಿಪಟ್ಟಿಗಳನ್ನು ಕಾಣುತ್ತೇವೆ. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟಗಳಲ್ಲಿ ಅನುಬಂಧವಾಗಿ 1 ಕವಿಸೂಚಿ 2 ಹಸ್ತಪ್ರತಿ ಲಿಪಿಕಾರರಸೂಚಿ 3 ಲಿಪಿಕಾರರ ಸ್ಥಳನಾಮಸೂಚಿ 4 ಹಸ್ತಪ್ರತಿದಾನಿಗಳ ಸೂಚಿ ಕಾಣುತ್ತೇವೆ. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯಲ್ಲಿ (ಸಂಪುಟ–4) ಪರಿಶಿಷ್ಟವಾಗಿ 'ಕನ್ನಡ ಹಸ್ತಪ್ರತಿಗಳಲ್ಲಿ ಸೇರಿರುವ ಸಂಸ್ಕೃತ–ತೆಲುಗು ಗ್ರಂಥಗಳ ಪಟ್ಟಿ ಕಂಡುಬರುತ್ತದೆ.

ಶ್ರವಣಬೆಳಗೊಳದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿಯ (ಸಂಪುಟ–1) ಕೊನೆಯಲ್ಲಿ ಕರ್ತೃಸೂಚಿ, ಶ್ರೀಕ್ಷೇತ್ರ ಶ್ರವಣಬೆಳಗೊಳದ ಪ್ರಕಟನೆಗಳನ್ನು ಕಾಣುತ್ತೇವೆ. ಬಿ.ಎಂ. ಶ್ರೀ.ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿಸೂಚಿಯಲ್ಲಿಯೂ ಕವಿಸೂಚಿ ಕೃತಿಸೂಚಿಗಳನ್ನು ಅನುಬಂಧದಲ್ಲಿ ಕೊಟ್ಟಿದ್ದಾರೆ. ಇವುಗಳನ್ನು ಕಂಡಾಗ ಸಂಪುಟದ ಕೊನೆಯಲ್ಲಿ ಗ್ರಂಥದ

ವಿವರಗಳೊಡನೆ ಕೊನೆಯಾಗುವ ಸಂಪುಟಗಳು ಮತ್ತು ಅನುಬಂಧಗಳೊಡನೆ ಮುಕ್ತಾಯವಾಗುವ ಸಂಪುಟಗಳು ಎಂದು ಎರಡು ಬಗೆಯಾಗಿ ಕಾಣುತ್ತೇವೆ. ಉಪಯುಕ್ತತೆ ದೃಷ್ಟಿಯಿಂದ ಪರಿಶೀಲಕರಿಗೆ ಒಳಗೇನಿದೆ ಎಂಬುದು ಮೊದಲೇ ತಿಳಿಯುವ ದೃಷ್ಟಿಯಿಂದ ಕವಿಸೂಚಿ, ಕೃತಿಸೂಚಿ, ಇತ್ಯಾದಿಗಳನ್ನು ಸಂಪುಟದ ಮೊದಲಿಗೇ ಕೊಡುವುದು ಹೆಚ್ಚು ಸೂಕ್ತ ಎನಿಸುತ್ತದೆ. ಈ ವಿಚಾರದಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಸೂಚಿಗಳು ಉತ್ತಮ ಮಾದರಿಗಳಾಗಿವೆ ಎನ್ನಬಹುದು.

**ಸೂಚಿಶಿಲ್ಪ**

**ವಿನ್ಯಾಸ:** ಕನ್ನಡ ಸಂಶೋಧನಸಂಸ್ಥೆಯ ವರ್ಣನಾತ್ಮಕ ಸೂಚಿಯಲ್ಲಿ ಸೂಚಿತವಾದ 15 ವಿವರಗಳು ಹೀಗಿವೆ.

1. ಹೆಸರು
2. ವಸ್ತು
3. ಅಂಕ
4. ಆಕಾರ
5. ವಿವರ
6. ದೊರೆತಸ್ಥಳ
7. ಪ್ರತಿಮಾಡಿದವ
8. ಗ್ರಂಥದಕಾಲ
9. ಕರ್ತೃ
10. ವಿಷಯ.
11. ಶೈಲಿ
12. ಆರಂಭ
13. ಮುಕ್ತಾಯ
14. ಸಂದರ್ಭ
15. **Remarks**

ಈ 15 ವಿವರಗಳನ್ನು ಒಂದರಕೆಳಗೆ ಒಂದರಂತೆ ಕೊಡಲಾಗಿದೆ. ಬೇರೆಯವರ ಸೂಚಿಗಳಲ್ಲಿ ಸ್ತಂಭಾಕಾರವಾಗಿ ವಿವರಗಳನ್ನು ಕೊಡದೆ. ಅಡ್ಡಡ್ಡವಾಗಿ ವಿವರಗಳನ್ನು ಕೊಡಲಾಗಿದೆ.

ಮಾದರಿಗಾಗಿ ಒಂದು ನಿದರ್ಶನಗಳನ್ನು ಗಮನಿಸಬಹುದು.

**ಮಾದರಿ :**

171

**(ಸಂಖ್ಯೆ)**

| | | |
|---|---|---|
| ಚನ್ನಬಸವಣ್ಣ–1160 | ಜೋಗುಳಪದಗಳು | ಹಾಡು |
| **(ಕವಿ–ಕಾಲ)** | **(ಹೆಸರು)** | **(ಪ್ರಕಾರ)** |
| ಕಾ.ಪ್ರ. 1838–7 | 81/3X 5[11] | 29–33 |
| **(ವಸ್ತುಸಂಖ್ಯೆ)** | **(ಗರಿಅಳತೆ)** | **(ಗರಿಸಂಖ್ಯೆ)** |
| ಉತ್ತಮ | ಉತ್ತಮ | ಉತ್ತಮ |
| (ಸ್ಥಿತಿ) | (ಸ್ಥಿತಿ) | (ಸ್ಥಿತಿ) |

**ಆದಿ:** ಜೋಗುಳಪದ ಬರಿಯುವುದು.............ಬಂದಿಂದ ಕೈಗೊಂಡು ಬಂದ ಬಸವನು ಜೋ ಜೋ.

**ಅಂತ್ಯ:** ಹೆಸರಿಟ್ಟ ಶರಣರು.........ಗುರು ಕೊಟ್ಟೂರೇಶದಯಾನಾಗಿರುವ ಜೋ ಜೋ. ॥25॥ ಜೋ ಜೋ.

**ವಿಷಯ:** ಸಮಗ್ರ

ಈ ಕಟ್ಟಿನಲ್ಲಿರುವ ಕೃತಿಗಳು: ಪಾರಿಜಾತ (ಕ್ರ.ಸಂ.256) ನೋಡಿರಿ

**ವಿವಿಧ ಸೂಚೀಶಿಲ್ಪಗಳು**

ಹಂಪಿ ಕ.ವಿ.ಹಸ್ತಪ್ರತಿಸೂಚಿಗಳ ಸಂಪಾದಕರು ಪ್ರಸ್ತಾವನೆಯಲ್ಲಿ ಸೂಚೀಶಿಲ್ಪವನ್ನು ಕುರಿತು ಹೀಗೆ ಹೇಳಿದ್ದಾರೆ: "ಆಧುನಿಕ ಹಸ್ತಪ್ರತಿ ಭಂಡಾರಗಳು ಸೂಚೀರಚನೆಯನ್ನು ಒಂದು ಶಿಸ್ತನ್ನಾಗಿ ರೂಪಿಸಿವೆ. ಆದರೆ ಈ ಸೂಚೀ ತಯಾರಿಕೆಯಲ್ಲಿ ಒಂದೊಂದು ಸಂಸ್ಥೆ ಒಂದೊಂದು ರೀತಿಯ ಕ್ರಮವನ್ನು ಅನುಸರಿಸಿವೆ. ಆದರೆ ಈ ವರೆಗೆ ಪ್ರಕಟವಾದ ಹಸ್ತಪ್ರತಿಸೂಚಿಗಳನ್ನು ಪರಿಶೀಲಿಸಿ ಅವುಗಳಲ್ಲಿರುವ ದೋಷಗಳನ್ನು

ಸರಿಪಡಿಸಿಕೊಂಡು ಎಂ.ಎಂ. ಕಲಬುರ್ಗಿ ಅವರು ಸಿದ್ಧಪಡಿಸಿದ ಸೂಚಿಯನ್ನು ಮಾದರಿಯನ್ನಾಗಿಟ್ಟುಕೊಂಡು ನಾವು ಈ ಸೂಚೀಸಂಪುಟವನ್ನು ರೂಪಿಸಿದ್ದೇವೆ ಎಂದಿದ್ದಾರೆ. ಈಚೆಗೆ ಹಲವಾರು ಕಲಬುರ್ಗಿ ಅವರ ಕೃತಿಪರಿಚಯ ಪ್ರತಿಪರಿಚಯ ವಿನ್ಯಾಸವನ್ನು ಅನುಸರಿಸಿದ್ದಾರೆ. ಆದರೆ ಅನೇಕರು ತಮ್ಮದೇರೀತಿಯಲ್ಲಿ ಸೂಚಿಶಿಲ್ಪ ಬಳಸಿದ್ದಾರೆ.

ಆ ಮಾದರಿಗಳು ಹೀಗಿವೆ:

**1. ಮದ್ರಾಸ್ ಓರಿಯಂಟಲ್ ಹಸ್ತಪ್ರತಿ ಭಂಡಾರದ ವರ್ಣನಾತ್ಮಕ ಸೂಚಿ**

ಈ ಸೂಚಿಯಲ್ಲಿ ಈ ಕೆಳಕಂಡ ಅಂಶಗಳು ಬರುತ್ತವೆ.

1) ಕ್ರಮಾಂಶ
2) ಶಿರೋನಾಮೆ
3) ವಸ್ತು
4) ಆಕಾರ
5) ಪುಟಸಂಖ್ಯೆ
6) ಪುಟಕ್ಕೆ ಸಾಲುಗಳು
7) ಲಿಪಿ
8) ಸ್ಥಿತಿ
9) ಬರವಣಿಗೆ
10) ಪೂರ್ಣ–ಅಪೂರ್ಣ
11) ವಿವರಣೆ
12) ಪ್ರಾರಂಭ
13) ಕೊನೆ
14) ಸಮಾಪ್ತಿ ವಚನ

ಹೀಗೆ 14 ಅಂಶಗಳು ಈ ಸೂಚಿಯಲ್ಲಿ ಬರುತ್ತವೆ.

**ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿಸೂಚಿ: (ಪ್ರಸಾರಾಂಗ.ಬೆಂ.ವಿ.ವಿ)**

ಸಂಪಾದಕರು–ಎಸ್.ಶಿವಣ್ಣ

| | | |
|---|---|---|
| ಕೆ–181 | ಅನಾದಿವೀರಶೈವಸಾರಸಂಗ್ರಹ | ಶ್ಲೋಕ. |
| (1) | (2) | (3) |
| 14.7x2.1 | ಮೂಲಸಂಪಾದನೆ ಸಿದ್ಧವೀರರಾಖ್ಯ. | 1650 |
| (4) | (5) | (6) |
| 1–283(ಗರಿ) | 11–14(ಸಾಲು) ಪಂಕ್ತಿ–7 | 74.ಅಕ್ಷರ |
| (7) | (8) | (9) |

ಆದಿ. (10)

ಅಂತ್ಯ. (11)

ವಿಷಯ. (12)

ವಿಶೇಷ. (13)

ಹೀಗೆ 13 ಅಂಶಗಳಿಂದ ರಚಿತವಾಗಿದೆ.

**ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಬೆಂಗಳೂರು**

ಸಂ. ಗುಂಡಾಜೋಯಿಸ

ನಾ.ಗೀತಾಚಾರ್ಯ

| | | |
|---|---|---|
| ನಂ–ಓ/1 | ಮಹಲಿಂಗರಂಗ | 59 ಅಕ್ಷರ |
| 36.6x2.5c.m | ಕ್ರಿ.ಶ.ಸು.1675. | 5.ಸಾಲು. |
| 97.ಪತ್ರ | ಷಟ್ಪದಿ. | ಕನ್ನಡ. |

ವಿಷಯ.

ಆದಿ.

ಅಂತ್ಯ.

ವಿ.ವಿಭಾಗ.

## ಹುಬ್ಬಳ್ಳಿ ಮೂರುಸಾವಿರಮಠದ ಹಸ್ತಪ್ರತಿಸೂಚಿ:

1. ಹ.ಪ್ರ.ಸಂ. 49
2. ಲಿಖಿತವಸ್ತು ತಾಳೆಯೋಲೆ.
3. ಸಾಲು–8
4. ಅಕ್ಷರಸಂಖ್ಯೆ–34
5. ಓಲೆಸಂಖ್ಯೆ–80
6. ಪ್ರಮಾಣ
7. ಉ–21.7 ಸೆಂ.ಮಿ
8. ಅ–5. ಸೆಂ.ಮಿ
9. ಗ್ರಂಥಕಾರ:–ಪಾಲ್ಕುರಿಕೆ ಸೋಮನಾಥ.
10. ಕಾಲ–1195
11. ಲಿಪಿ:–ಕನ್ನಡ
12. ಭಾಷೆ:–ಕನ್ನಡ
13. ಶೈಲಿ–ಗದ್ಯ.ವೃತ್ತ
14. ಸ್ಥಿತಿ–ಸಮಗ್ರ
15. ಆದಿ. 16. ಅಂತ್ಯ. 17. ವಿಷಯ.
18. ವಿಶೇಷ.

## ಜಗದ್ಗುರು ತೋಂಟದಾರ್ಯಮಠದ ಹಸ್ತಪ್ರತಿಸೂಚಿ:

1. ಕ್ರಮ
2. ಕೃತಿಯ ಹೆಸರು
3. ಕೃತಿಕಾರ
4. ಕಾಲ
5. ಸಂಖ್ಯೆ
6. ಗರಿ/ಹಾಳೆ
7. ಪ್ರಕಾರ
8. ಇತರ ವಿವರ.

**ಕನ್ನಡ ಅಧ್ಯಯನಪೀಠದ ಸೂಚಿಗಳು:**

| | |
|---|---|
| 1. ತಾ.ಪ್ರ /ಕಾ.ಪ್ರ | 3. ಕಾಲ |
| 2. ಪುಟ | 4. ಸಾಲು |
| 5. ಆದಿ | |
| 6. ಅಂತ್ಯ | |
| 7. ವಿಷಯ | |
| 8. ವಿಶೇಷ. | |

**ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ವರ್ಣನಾತ್ಮಕ ಸೂಚಿ:**

| | |
|---|---|
| 1. ಗ್ರಂಥಗಳ ಕ್ರಮಾಂಕ | 2. ಗ್ರಂಥದ ಸಾಂಕೇತಿಕಾಂಕ |
| 3. ಗ್ರಂಥದ ಹೆಸರು | 4. ಗ್ರಂಥ ಪ್ರಭೇದ |
| 5. ಅಳತೆ | 6. ಕವಿಯ ಹೆಸರು |
| 7. ಕವಿಯ ಕಾಲ | 8. ಗ್ರಂಥ ಪ್ರಾರಂಭವಾಗುವ ಮುಗಿಯುವ ಪತ್ರ ಸಂಖ್ಯೆ |
| 9. ಸಾಲಿನ ಸಂಖ್ಯೆ | 10. ಅಕ್ಷರಸಂಖ್ಯೆ |
| 11. ಆದಿ | 12. ಅಂತ್ಯ |
| 13. ವಿಷಯ | 14. ವಿಶೇಷ. |

**ಲಂಡನ್ ಲೈಬ್ರರಿಗಾಗಿ ತಯಾರಿಸಿದ ಸೂಚಿ:**

ಇವರು ಒಂದು ಹಸ್ತಪ್ರತಿಯ ವಿವರಗಳನ್ನು ಎರಡು ಭಾಗಮಾಡಿದ್ದಾರೆ. ಒಂದು, ಕೃತಿಪರಿಚಯ, ಎರಡು, ಪ್ರತಿಪರಿಚಯ.

**1. ಕೃತಿಪರಿಚಯ**

| | | |
|---|---|---|
| 1. ಹೆಸರು | 2. ಕವಿ | 3. ಪ್ರಕಾರ |
| 4. ಕಾಲ | 5. ವಿಷಯ | |

**2. ಪ್ರತಿಪರಿಚಯ**

| | | |
|---|---|---|
| 1. ಹಸ್ತಪ್ರತಿಯ ಕ್ರಮಾಂಕ | 2. ಅಕ್ಷರ | 3. ಆಕಾರ |
| 4. ಸ್ವರೂಪ | 5. ಗರಿ | 6. ಸ್ಥಿತಿ |
| 7. ಮಿತಿ | 8. ಪ್ರಾರಂಭ | 9. ಅಂತ್ಯ |
| 10. ವಸ್ತು. | | |

**ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು.**

| | | |
|---|---|---|
| | ಸಂ:- ಎ.ಆರ್. ಗುರು | |
| ಕಾ/2 | ಮಧ್ವದಾಸ | 30 |
| 20.31.5 | 1800 | 23 |
| 12 ಪುಟಗಳು | ಯಕ್ಷಗಾನ | ಕನ್ನಡ |
| ಅಲಿಗೆ ಮಂಜಪ್ಪ | | 1910 |
| ಆದಿ. | | |
| ಅಂತ್ಯ. | | |
| ವಿ.ವಿ. | | |
| ಪ್ರತಿಯ. ಕಾಲ. ನಿರ್ಧಾರ. | | |

**ಕೆಳದಿ ಸಂಗ್ರಹಾಲಯ ಮತ್ತು ಐತಿಹಾಸಿಕಸಂಶೋಧನ ಕೇಂದ್ರದ ವರ್ಣನಾತ್ಮಕ ಹಸ್ತಪ್ರತಿಸೂಚಿ:**

ಸಂ- ಎಸ್.ಆರ್.ರಾವ್.

ಗುಂಡಾಜೋಯಿಸ್.

ಸಾಮಗ್ರಿ:- ತಾಳೆಯೋಲೆ    ಹ.ಪ್ರ.ಸಂ.-104

ಪ್ರಮಾಣ:- 26.9X5.9ಸೆ.ಮಿ.    ಓಲೆಗರಿ ಸಂಖ್ಯೆ 35.

ಲಿಪಿ.ಕನ್ನಡ. ಭಾಷೆ. ಕನ್ನಡ.    ಹ.ಪ್ರ.ಕಾಲ. 18ನೇ ಶತಮಾನ.

ಸ್ಥಳ-ಕೆಳದಿ

ಆದಿ.    ಮಧ್ಯ.    ಅಂತ್ಯ.    ವಿ.ವಿ.

**The kannada munuscripts In the Osmania University Library- Hydrabad**

**Ed:- B.Ramachandrarao. M.A.Ph.D.**

ms. No. 1116    ಕರ್ತೃ.    ಅಳತೆ.    ಶೈಲಿ.

ಪುಟ. ಅಕ್ಷರ.

ಆರಂಭ.

ಅಂತ್ಯ

ರಿಮಾರ್ಕ್ಸ್.

ಸೂಚಿಶಿಲ್ಪದ ವಿವಿಧ ಬಗೆಗಳನ್ನು ಕಂಡಾಗ ಕೆಲವು ವಿಶಿಷ್ಟಾಂಶಗಳನ್ನು ಹೀಗೆ ಗುರುತಿಸಬಹುದು.

ಎಲ್ಲಾ ಸೂಚಿಗಳಲ್ಲೂ 1. ಹೆಸರು 2. ಕ್ರಮಾಂಕ 3. ಹಸ್ತಪ್ರತಿಸ್ಥಿತಿ 4. ಪ್ರತಿಯ ಸಮಗ್ರತೆ ಅಥವಾ ಅಸಮಗ್ರತೆ 5. ಆದಿ 6. ಅಂತ್ಯ 7. ವಿಷಯ ಗರಿಸಂಖ್ಯೆ ಗರಿಪಂಕ್ತಿಗಳು (ಕಾ.ಪ್ರ/ಓ.ಪ್ರ) ವಸ್ತು ಮೊದಲಾದ ವಿವರಗಳು ಸಾರ್ವತ್ರಿಕವಾಗಿ ಕಾಣುತ್ತವೆ.

ಕಟ್ಟುಗಳಲ್ಲಿರುವ ಇತರ ಕೃತಿಗಳು, Remarks (ಇಂಗ್ಲಿಷಿನಲ್ಲಿ ಟಿಪ್ಪಣಿ) ಕವಿಚರಿತ್ರೆಯಲ್ಲಿ ಗ್ರಂಥದ ಉಲ್ಲೇಖವಿಚಾರ, ಪ್ರತಿದೊರೆತಸ್ಥಳ, ಪ್ರತಿಕಾರನಹೆಸರು, ಇವೇ ಮುಂತಾದ ಕೆಲವು ವಿವರಗಳು ಎಲ್ಲಾ ಸೂಚಿಗಳಲ್ಲೂ ಇಲ್ಲ.

## ವಿವರಗಳಲ್ಲಿ ವೈವಿಧ್ಯ

ಇನ್ನು ಒಂದೊಂದು ವಿಭಾಗದಲ್ಲೂ ನೀಡಿರುವ ವಿವರಗಳಲ್ಲಿ ವ್ಯತ್ಯಾಸಗಳಿವೆ.ಕನ್ನಡ ಸಂಶೋಧನಸಂಸ್ಥೆಯ ಸೂಚಿಗಳ ಹಿನ್ನೆಲೆಯಲ್ಲಿ ಇವುಗಳನ್ನು ಗಮನಿಸಲಾಗಿದೆ.

**1. ಕ್ರಮಸಂಖ್ಯೆ:**

ಆಯಾ ಹಸ್ತಪ್ರತಿ ಭಂಡಾರಗಳಲ್ಲಿ ಓಲೆಕಟ್ಟುಗಳಿಗೆ ಕೊಟ್ಟ ಕ್ರಮಾಂಕ ಇದಾಗಿರುತ್ತದೆ. ಎಲ್ಲ ಭಂಡಾರಗಳಲ್ಲೂ ಓಲೆಕಟ್ಟಿಗೊಂದು ಸಂಖ್ಯೆ ಕೊಟ್ಟು ಕ್ರಮವಾಗಿ ಜೋಡಿಸಿರುವ ಪರಿಪಾಟವಿದೆ.

**2. ಹೆಸರು:**

ಗ್ರಂಥದ ಹೆಸರನ್ನು ಉಲ್ಲೇಖಿಸಲಾಗುತ್ತದೆ. ಇಲ್ಲಿ ಭಾಷೆಯ ಪ್ರಸ್ತಾಪವಿಲ್ಲ. ಏಕೆಂದರೆ ಒಂದು ಕಟ್ಟಿನಲ್ಲಿ ಬೇರೆಬೇರೆ ಭಾಷೆಯ ಪ್ರತಿಗಳಿದ್ದರೂ ಕನ್ನಡ ಹಸ್ತಪ್ರತಿಗಳನ್ನು ಮಾತ್ರ ಪಟ್ಟಿ ಮಾಡಿರುತ್ತಾರೆ. ಬೇರೆ ಭಾಷೆಯ ಕೃತಿಗಳನ್ನು ಅನುಬಂಧವಾಗಿ ಕೆಲವರು ಕೊಟ್ಟಿದ್ದಾರೆ. ಮತ್ತೆ ಕೆಲವರು ವಿಶೇಷ ವಿಷಯದಲ್ಲಿ ತಿಳಿಸಿರುತ್ತಾರೆ.[5]

**3. ವಸ್ತು:**

ಹಸ್ತಪ್ರತಿಗೆ ಬಳಸಿದ ವಸ್ತುವನ್ನು ತಿಳಿಸಲಾಗಿದೆ. ಶಾಸನ, ಕಡತ, ಕಾಗದ, ತಾಮ್ರಪಟ, ಮೊದಲಾದವುಗಳ ಮೇಲೆ ಬರಹಗಳನ್ನು ಬರೆದರೂ ಗ್ರಂಥ ರಚನೆ ಕಂಡುಬರುವುದು ಕಾಗದ ಅಥವಾ ತಾಳೆಗರಿಗಳಲ್ಲಿ ಮಾತ್ರ. ಆದ್ದರಿಂದ ಓಲೆಗರಿ–ಕಾಗದಪ್ರತಿಗಳನ್ನು ಮಾತ್ರ ಹಸ್ತಪ್ರತಿಗಳೆಂದು ಪರಿಗಣಿಸುವ ಪರಿಪಾಟವಿದೆ. ಕಾಗದ ಮತ್ತು ತಾಡೋಲೆ ಎಂಬ ಪದಗಳನ್ನು ಇಲ್ಲಿ ಬಳಸಿದೆ. ಬೇರೆ ಸೂಚಿಗಳಲ್ಲಿ ಕಾಗದ ಪ್ರತಿ=ಕಾ.ಪ್ರ.

ಓಲೆಗರಿಪ್ರತಿ=ಓ.ಪ್ರ, ತಾಳೆಗರಿಪ್ರತಿ=ತಾ.ಪ್ರ, ಎಂಬ ಮಾತುಗಳನ್ನು ಬಳಸಲಾಗಿದೆ.[6] ಮೈ.ಪ್ರಾ.ವಿದ್ಯಾ. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿಯಲ್ಲಿ ಬೇರೆ ಸಂಕೇತಗಳನ್ನೇ ಕೊಟ್ಟಿದ್ದಾರೆ. " ಗ್ರಂಥದ ಸಾಂಕೇತಿಕಾಂಕ (ಕಟ್ಟಿನಸಂಖ್ಯೆ) ಹಿಂದೆ 'ಕೆ' ಎಂದು ಮಾತ್ರ ಇದ್ದರೆ ಅದು ಓಲೆಯಪ್ರತಿಯೆಂದು, 'ಕೆಎ' ಎಂದಿದ್ದರೆ ದೊಡ್ಡ ಅಳತೆಯ ಕಾಗದದಪ್ರತಿಯೆಂದು 'ಕೆ.ಬಿ.' ಎಂದಿದ್ದರೆ ಚಿಕ್ಕ ಅಳತೆಯ ಕಾಗದದ ಪ್ರತಿಯೆಂದು ಸೂಚನೆ ಸೂಚನೆ ಎಂದಿದ್ದಾರೆ.[7]

ವಸ್ತು ಕಾಗದವೇ ತಾಳೆಗರಿಯೇ ಎಂದು ಸೂಚಿಸುವ ಎಡೆಯಲ್ಲಿಯೇ ತಾಳೆಗರಿಯ ಕಟ್ಟಿನ ಕ್ರಮಾಂಕವನ್ನು ಕೊಡುವುದನ್ನು ಎಲ್ಲ ಸೂಚಿಗಳಲ್ಲೂ ಕಾಣುತ್ತೇವೆ. ಆದರೆ ಕಟ್ಟಿನಲ್ಲಿರುವ ಇತರ ಗ್ರಂಥಗಳ ಸಂಖ್ಯೆಯನ್ನು ಸೂಚಿಸುವರೀತಿ ಕೆ.386/2 ಎಂದರೆ ತಾಳೆಗರಿ ಕಟ್ಟಿನ ಸಂಖ್ಯೆ 386 ಅದರಲ್ಲಿ 2 ಗ್ರಂಥಗಳಿವೆ (ಕನ್ನಡಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ) ಎಂದು ಸೂಚಿಸುವ ರೀತಿ ಬೇರೆಲ್ಲೂ ಇಲ್ಲ.

**4. ಆಕಾರ:**

(ತಾಳೆಗರಿವಿವರ) ತಾಳೆಹಾಳೆಗಳು ಎಷ್ಟಿವೆ ಒಂದುಪುಟದಲ್ಲಿ ಎಷ್ಟು ಸಾಲುಗಳಿವೆ ಒಂದು ಸಾಲಿಗೆ ಎಷ್ಟಕ್ಷರಗಳಿವೆ ಎಂಬ 3 ಬಗೆಯ ವಿವರಗಳನ್ನು ಪ್ರಾಚ್ಯವಿದ್ಯಾ ಸಂಶೋಧನಾಲಯದ ವರ್ಣನಾತ್ಮಕಸೂಚಿಯಲ್ಲಿ ಕಾಣುತ್ತೇವೆ. ಆದರೆ ಕೆ.ಆರ್.ಐ. ಪ್ರತಿಯಲ್ಲಿ ಆಕಾರ ಎಂಬ ಶೀರ್ಷಿಕೆಯಲ್ಲಿ ತಾಳೆಗರಿ ಉದ್ದಗಲದ ಅಳತೆಯನ್ನಷ್ಟೆ ಕಾಣುತ್ತೇವೆ ಆದರೆ ವಿವರ ಎಂಬ ಶೀರ್ಷಿಕೆಯಲ್ಲಿ ಉಳಿದ ವಿವರಗಳಿವೆ. ತಾಳೆಗರಿಯ ಒಂದು ಪುಟದಲ್ಲಿ ಎಷ್ಟು ಸಾಲು ಎಷ್ಟು ಅಕ್ಷರಗಳಿವೆ ಒಟ್ಟು ಎಷ್ಟು ತಾಳೆಗರಿಗಳ ಕಾವ್ಯ ಎಂಬ ವಿವರ ಕೊಡುವುದರಿಂದ ಗ್ರಂಥದ ಗಾತ್ರವನ್ನು ಊಹಿಸಬಹುದು ಉಳಿದ ಸೂಚಿಗಳಲ್ಲಿ ಪತ್ರಸಂಖ್ಯೆ ಸಾಲುಗಳಸಂಖ್ಯೆ ಮಾತ್ರ ಕಾಣುತ್ತೇವೆ. ಕ.ಅ.ಪೀ.ದ ಸೂಚಿಯಲ್ಲಿ ಪತ್ರಸಂಖ್ಯೆ ಸಾಲುಸಂಖ್ಯೆ ಎಂದು ವಿವರ ಮಾತ್ರ ಇವೆ. ಈ ದೃಷ್ಟಿಯಲ್ಲಿ ಮೈ.ಪ್ರಾ.ವಿದ್ಯಾ ಸಂಶೋಧನಾಲಯದ ಸೂಚಿ ಹೆಚ್ಚು ವಿವರಗಳನ್ನು ಸೂಚಿಸುತ್ತವೆ ಎನ್ನಬಹುದು.

**5. ವಿವರ:**

ಆಕಾರ ಶೀರ್ಷಿಕೆ ನಂತರ ಕೆ.ಆರ್.ಐ. ಸೂಚಿಯಲ್ಲಿ ಓಲೆಯಬಗ್ಗೆ ಸಮಗ್ರವೇ ಅಸಮಗ್ರವೇ ಲುಪ್ತಗರಿಗಳ ವಿವರ ಪ್ರತಿಓಲೆಯಲ್ಲಿರುವ ಸಾಲುಗಳು ಪ್ರತಿಸಾಲಿನಲ್ಲಿರುವ ಅಕ್ಷರಸಂಖ್ಯೆ ಗ್ರಂಥದಸ್ಥಿತಿ ಉತ್ತಮವೇ ಸಾಧಾರಣವೇ ಕಾವ್ಯ ಒಟ್ಟು ಎಷ್ಟು ಗರಿಗಳಲ್ಲಿವೆ ಇವೇ ಮೊದಲಾದ ಸಂಗತಿಗಳೆಲ್ಲ ನಮೂದಿತವಾಗಿರುತ್ತವೆ.

ಉದಾಹರಣೆಗೆ:– 'ಗಿರಿಜಾಕಲ್ಯಾಣ' ಹಸ್ತಪ್ರತಿಯ 'ವಿವರ' ಶೀರ್ಷಿಕೆಯಲ್ಲಿ ಉಲ್ಲೇಖಿತವಾದ ಸಂಗತಿಗಳನ್ನು ಗಮನಿಸಬಹುದು.[8]

ವಿವರ:– ಈ ಗ್ರಂಥವು 1ನೆಯ ಓಲೆಯಲ್ಲಿ ಆರಂಭವಾಗಿ 25ನೆಯ ಓಲೆಯಲ್ಲಿ ಅಪೂರ್ಣವಾಗಿದೆ. ಪುಟಗಳ ಎರಡೂ ಬದಿಗಳಲ್ಲಿ ಬರಹವಿದೆ. 2–3–18–19–20–21–33–34– ಈ ಓಲೆಗಳಿಲ್ಲ ಒಂದೊಂದು ಬದಿಯಲ್ಲಿ 8–9 ಸಾಲುಗಳು ಬರೆದಿದ್ದು ಪ್ರತಿಸಾಲಿನಲ್ಲಿ 40–41 ಅಕ್ಷರಗಳಿವೆ. ಅಕ್ಷರಗಳು ಓದಲು ಬರುವಂತಿದ್ದು ಗ್ರಂಥ ಸಾಧಾರಣವಾಗಿದೆ. ಇನ್ನೂ 1–2 ಪುಟಗಳಲ್ಲಿ ಗ್ರಂಥ ಪೂರ್ಣವಾಗುವಂಥ ವಿಷಯವಿದೆ. ಇದೇ ಬಗೆಯ ವಿವರಗಳನ್ನು ಪ್ರಾಚ್ಯವಿದ್ಯಾ ಸಂಶೋಧನಾಲಯದ ಸೂಚಿಯಲ್ಲಿ **ವಿಶೇಷ** ಎಂಬ ಶೀರ್ಷಿಕೆಯಲ್ಲಿ ಕೊಡಲಾಗಿದೆ. ಬಿ.ಎಂ.ಶ್ರೀ. ಸೂಚಿಯಲ್ಲಿ ವಿ.ವಿ.(ವಿಶೇಷ ವಿಷಯ) ಎಂಬ ಶೀರ್ಷಿಕೆಯಲ್ಲಿ ಕೊಟ್ಟಿದೆ.[9] ಹಂಪಿ ಕ.ವಿ.ದ ಸೂಚಿಯಲ್ಲಿ ವಿಶೇಷ ಶೀರ್ಷಿಕೆಯಲ್ಲಿ ಕೇವಲ ಪ್ರತಿಯಬಗ್ಗೆ ಸಮಗ್ರ ಅಥವಾ ಅಸಮಗ್ರ ಎಂದಷ್ಟೇ ಮಾಹಿತಿ ಇದೆ. ಹೆಚ್ಚಿನ ವಿವರಗಳಲ್ಲಿ ಈ ದೃಷ್ಟಿಯಲ್ಲಿ ಕೆ.ಆರ್.ಐ ಸೂಚಿಯೇ ಉತ್ತಮ ಹೆಚ್ಚಿನ ವಿವರಗಳನ್ನು ನೀಡುತ್ತದೆ.

### 6. ದೊರೆತಸ್ಥಳ:

ಗ್ರಂಥ ಭಂಡಾರಕ್ಕೆ ಹಸ್ತಪ್ರತಿ ದೊರೆತ ಸ್ಥಳವನ್ನು ಪ್ರತಿಗ್ರಂಥದ ವಿವರಣೆಯಲ್ಲೂ ನಮೂದಿಸುತ್ತಾರೆ. ಗ್ರಂಥ ದೊರೆತಸ್ಥಳದವಿವರ ಸಿಕ್ಕಾಗ, ಕಾವ್ಯದ ಭಾಷೆ ಮತ್ತು ಕವಿಯ ವಿವರಗಳು ಮೊದಲಾದ ಸಂಗತಿಗಳ ಬಗ್ಗೆ ನೆರವು ಸಿಕ್ಕುವ ಸಂಭವವಿದೆ. ಪಾಠ ಪರಿಷ್ಕರಣವೇ ಗ್ರಂಥ ಪೀಳಿಗೆ ರಚಿಸಲು ನೆರವಾಗುತ್ತದೆ. ಕ.ಅ.ಪೀ. ಸೂಚಿಯಲ್ಲಿ ಮತ್ತು ಕೆ.ಆರ್.ಐ. ಪ್ರತಿಯಲ್ಲಿ ಪ್ರತಿಗ್ರಂಥದಲ್ಲೂ ದೊರೆತಸ್ಥಳವನ್ನು ನಮೂದಿಸಿದೆ. ಆದರೆ ಹಂಪಿ, ಕವಿಸೂಚಿಯಲ್ಲಿ ಅನುಬಂಧದಲ್ಲಿ ಸ್ಥಳನಾಮಸೂಚಿಯಲ್ಲಿ ವಿವರಕೊಟ್ಟಿದೆ. ಕನ್ನಡ ಅಧ್ಯಯನಪೀಠದ ಸೂಚಿಯಲ್ಲಿ ಸ್ಥಳದ ಬಗ್ಗೆ ಸ್ವಲ್ಪ ಹೆಚ್ಚಿನಮಾಹಿತಿ ನಮೂದಿತವಾಗಿದೆ. ಊರು, ಊರಿನಲ್ಲಿಯ ಸ್ಥಳ ಎರಡನ್ನು ಅಲ್ಲಿ ಹೇಳಲಾಗಿದೆ. ಉದಾ(ಸಂಪುಟ–6) (ಪುಟ–119) ಬಸವತೀರ್ಥಮಠ, ಹುಮ್ನಾಬಾದ್, ಹಂಪಿಯ ಕ.ವಿ. ಸೂಚಿಯಲ್ಲಿ ಕೇವಲ ಊರಿನ ಹೆಸರಷ್ಟೇ ಇದೆ. ಬಿ.ಎಂ.ಶ್ರೀ.ಸಂಸ್ಥೆಯ ಸೂಚಿಯಲ್ಲಿ ಗ್ರಂಥದ ಸ್ಥಳಸೂಚಿ ಇಲ್ಲ.

### 7. ಕಾಲ:

ಕವಿ ಅಥವಾ ಕರ್ತೃವಿನ ಕಾಲವನ್ನು ಕವಿಯ ಹೆಸರನ್ನು ಒಟ್ಟಿಗೆ ಹಂಪಿ ಕ.ವಿ. ಹಸ್ತಪ್ರತಿಸೂಚಿಯಲ್ಲಿ ಕೊಟ್ಟಿದ್ದರೆ, ಕನ್ನಡ ಸಂಶೋಧನಸಂಸ್ಥೆಯಲ್ಲಿ ಗ್ರಂಥದ ಪ್ರತಿಮಾಡಿದ ಕಾಲವನ್ನು ಕೊಡಲಾಗಿದೆ. ಗ್ರಂಥಕರ್ತೃವಿನ ಅಥವಾ ಮೂಲಗ್ರಂಥ ರಚನಾಕಾಲವನ್ನು ಕೊಟ್ಟಿಲ್ಲ. ಇದು ಈ ಸೂಚಿಗೂ ಉಳಿದ ಸೂಚಿಗೂ ಇರುವ ವ್ಯತ್ಯಾಸವಾಗಿದೆ.

**8. ಕರ್ತೃ:**

ಅಪೂರ್ಣಪ್ರತಿ ಇದ್ದಾಗ ಗ್ರಂಥದ ಯಾವುದೇ ಭಾಗವನ್ನು ಪ್ರತಿಮಾಡಿದಾಗ, ಸ್ತೋತ್ರ, ವಚನ, ಕೀರ್ತನೆ, ಇತ್ಯಾದಿ ಪ್ರತಿಮಾಡಿದಾಗ ಕರ್ತೃವಿನ ಹೆಸರು ಇರುವುದಿಲ್ಲ. ಕರ್ತೃಗೊತ್ತಿಲ್ಲದಾಗ ಕೃತಿಕಾಲವನ್ನು ಇತರ ಆಧಾರಗಳ ಮೇಲೆ ನಿರ್ಧರಿಸಬೇಕಾಗುತ್ತದೆ. ಸಾಮಾನ್ಯವಾಗಿ ಸೂಚಿಕಾರರು ಕವಿಚರಿತೆಕಾರರು ಸೂಚಿಸಿದ ಕವಿ–ಕಾಲದ ಮಾಹಿತಿಯನ್ನು ಹಾಕುತ್ತಾರೆ. ಆ ಬಗ್ಗೆ ಸಂಶೋಧನೆ ಆದ ಸಂಗತಿಗಳನ್ನು ಗಮನಿಸುವುದಿಲ್ಲ. ಇನ್ನು ಕವಿಚರಿತೆಯಲ್ಲಿ ಉಲ್ಲೇಖವಿಲ್ಲದ ಗ್ರಂಥಗಳನ್ನು ಕನ್ನಡ ಸಂಶೋಧನ ಸಂಸ್ಥೆಯ ಪ್ರಕಟನೆ ಬಿಟ್ಟರೆ ಬೇರೆಯವರು ಪ್ರತ್ಯೇಕವಾಗಿ ಉಲ್ಲೇಖಿಸಿಲ್ಲ. ಸಂದರ್ಭ ಎಂಬ ಕಾಲಂನಲ್ಲಿ ಕವಿಚರಿತೆಯಲ್ಲಿ ಉಲ್ಲೇಖ ಇದ್ದರೆ ಅದರ ವಿವರಗಳನ್ನು ಕ.ಸಂ.ಸಂ. ಸೂಚಿಯಲ್ಲಿ ಕೊಟ್ಟಿದೆ. ಕರ್ತೃ ತಿಳಿಯದಾಗ ? ಪ್ರಶ್ನಾರ್ಥಕ ಚಿಹ್ನೆ ಹಾಕಿರುತ್ತಾರೆ. ಊಹೆ ಮಾಡಿ ಕಾಲವನ್ನು ಗುರುತಿಸಬಹುದು ಆದರೆ ಕರ್ತೃವನ್ನು ಗುರುತಿಸುವುದು ಕಷ್ಟ.

**9. ಶೈಲಿ:**

ಸಾಹಿತ್ಯದ ಪ್ರಕಾರವನ್ನು ಶೈಲಿ ಎಂದು ಕರೆಯಲಾಗಿದೆ ಕ.ಸಂ.ಸಂ. ಸೂಚಿಯಲ್ಲಿ ಚಂಪೂ, ಶ್ಲೋಕಗಳು, ಮಂತ್ರಗಳು, ಸ್ರಗ್ಧರಾ, ಕಂದ, ರಗಳೆ, ಇತ್ಯಾದಿ ಛಂದೋರೂಪಗಳನ್ನು ಈ ವಿಭಾಗದಲ್ಲಿ ಹೇಳಲಾಗಿದೆ.

**10. ವಿಷಯ:**

ಇದನ್ನು ಉಳಿದ ಸೂಚಿಗಳಲ್ಲಿ ವಸ್ತು ಎಂದು ಗುರುತಿಸಲಾಗಿದೆ. ವಿಷಯವನ್ನು ಕೆಲವು ಸೂಚಿಗಳಲ್ಲಿ ಅತ್ಯಂತ ಸಂಕ್ಷಿಪ್ತವಾಗಿ ಒಂದೆರಡು ಪದಗಳಲ್ಲಿ ಇಲ್ಲವೇ ಒಂದೆರಡು ವಾಕ್ಯಗಳಲ್ಲಿ ಹೇಳಲಾಗಿದೆ. ಉದಾಹರಣೆಗೆ ನಾಗನೂರು ರುದ್ರಾಕ್ಷಿ ಮಠದ ಹಸ್ತಪ್ರತಿ ಸೂಚಿಯಲ್ಲಿ ಕ್ರಮಾಂಕ 93ರ ಪದ್ಯ ನಂಜೇದೇವರ ನಾಂದ್ಯದ ವಸ್ತುವನ್ನು ಸ್ತುತಿ ಪದಗಳ ಸಂಗ್ರಹ ಎಂದು ಒಂದೇ ಮಾತಿನಲ್ಲಿ ಸೂಚಿಸಲಾಗಿದೆ. ಹಂಪಿ ಕ.ವಿ.ಹಸ್ತಪ್ರತಿ ಸೂಚಿಯಲ್ಲೂ ಇದೇ ಕ್ರಮವಿದೆ ಒಂದೆರಡು ಪದಗಳಲ್ಲಿ ಅಥವಾ ಒಂದೆರಡು ವಾಕ್ಯಗಳಲ್ಲಿ ಕೃತಿಯ ವಸ್ತುವನ್ನು ಸೂಚಿಸಲಾಗಿದೆ. ಕೆಲವು ಕಡೆ ಶೀರ್ಷಿಕೆಯೇ ವಿಷಯ ತಿಳಿಸುತ್ತದೆ ಆದರೂ ಆ ಬಗ್ಗೆ ಒಂದು ಮಾತು ಹೇಳಲಾಗಿದೆ. ಉದಾ: 491 ಕ್ರಮಾಂಕ ಶಿವಗೀತೆ ಶಿವನಸ್ತುತಿ ಮಾಡಲಾಗಿದೆ. 564 ಕ್ರಮಾಂಕ ಸೋಮೇಶ್ವರಶತಕ, ನೀತಿತತ್ವ, ಧರ್ಮಬೋಧೆ, ಇತ್ಯಾದಿ (ಕ.ವಿ.ಹಂಪಿಸೂಚಿ ಪು–460 ಸಾಮಾನ್ಯವಾಗಿ ಎಲ್ಲಾ ಸೂಚಿಗಳಲ್ಲೂ ಇದೇ ಪದ್ಧತಿ ಕಾಣುತ್ತೇವೆ. ಆದರೆ ಕ.ಸಂ.ಸಂ ಹಸ್ತಪ್ರತಿಸೂಚಿಯಲ್ಲಿ ವಿಷಯವನ್ನು ಎಂದರೆ ಕೃತಿಯ ವಸ್ತುವನ್ನು ಅತಿವಿಸ್ತಾರವಾಗಿ ಪುಟಗಟ್ಟಲೆ ವರ್ಣಿಸಿದ್ದುಂಟು.

ಉದಾ: ಸಂಪುಟ 10 ರಲ್ಲಿ ಪುಟ 72ರಲ್ಲಿ ಚನ್ನಕ್ಕನ ಚರಿತ್ರೆ ಎಂಬ ಗ್ರಂಥದ ಬಗ್ಗೆ ಮೂರು ಪುಟಗಳಲ್ಲಿ ಇಡೀ ಕಾವ್ಯದ ಕಥೆ ಹೇಳಿದೆ. ಈ ಪುಟ್ಟಕಾವ್ಯದಲ್ಲಿರುವುದು. 3 ಸಂಧಿಗಳು 353 (ತ್ರಿಪದಿ) ಪದ್ಯಗಳು. ಒಂದು ರೀತಿಯಲ್ಲಿ ಇದು ಕೃತಿಯಬಗ್ಗೆ ಹೆಚ್ಚಿನ ಮಾಹಿತಿ ನೀಡಿದಂತೆ ಆದರೂ ಅಷ್ಟು ಅಗತ್ಯವಿಲ್ಲ ಎನ್ನಿಸುತ್ತದೆ. ಈ ರೀತಿ ವಿಸ್ತಾರವಾಗಿ ವಸ್ತುಪರಿಚಯ ನೀಡಿರುವುದು ಈ ಕ.ಸಂ.ಸಂ. ಸೂಚಿಗಳ ವೈಶಿಷ್ಟ್ಯ ಎನ್ನಬಹುದು. ಆಮೂಲಾಗ್ರವಾಗಿ ಹಸ್ತಪ್ರತಿ ಓದಿರುವುದಕ್ಕೆ ಇದು ಸಾಕ್ಷಿ. ಒಂದೆರಡು ಪದ್ಯಗಳಲ್ಲಿ ಅಥವಾ ಒಂದೆರಡು ವಾಕ್ಯದಲ್ಲಿ ವಿಷಯ ಹೇಳಲು ಇಡೀ ಗ್ರಂಥ ಓದಬೇಕಾಗಿಲ್ಲ ಅಥವಾ ಓದಿರುವುದಿಲ್ಲ.

**11. ಆರಂಭ:**

ಆರಂಭ ಮತ್ತು ಮುಕ್ತಾಯಗಳು ಇವೆರಡೂ ಹಸ್ತಪ್ರತಿಸೂಚಿಗಳ ಅತಿಮುಖ್ಯ ಭಾಗಗಳು. ಮೂಲದಲ್ಲಿರುವ ಶೈಲಿ-ಭಾಷೆಯಲ್ಲಿ ಹಾಗೆಯೇ ಕೊಡುವುದರಿಂದ ಕೃತಿಕಾಲ-ಕೃತಿಕಾರನಭಾಷೆ, ಲಿಪಿಕಾರನದೋಷ, ಇತ್ಯಾದಿ ಸಂಗತಿಗಳು ತಿಳಿಯುತ್ತವೆ. ಮತ್ತು ಕವಿಯ ಲಿಪಿಕಾರರ ಸಂಗತಿಗಳು ತಿಳಿಯುತ್ತವೆ. ಆರಂಭ-ಮುಕ್ತಾಯಗಳನ್ನು ಇತರ ಸೂಚಿಗಳಲ್ಲಿ ಆದಿ-ಅಂತ್ಯ ಎಂದು ಕರೆಯಲಾಗಿದೆ.[11]

**12. ಮುಕ್ತಾಯ:**

ಇದಕ್ಕೆ 'ಅಂತ್ಯ' ಎಂಬ ಶೀರ್ಷಿಕೆ ಕೊಟ್ಟಿದ್ದಾರೆ ಉಳಿದ ಸೂಚಿಗಳಲ್ಲಿ ಪ್ರಾರಂಭದಲ್ಲಿ ಕವಿ-ಕಾವ್ಯದ ಬಗ್ಗೆ ವಿವರ ತಿಳಿದರೆ, ಅಂತ್ಯದಲ್ಲಿ ವಿಶೇಷವಾಗಿ ಲಿಪಿಕಾರರ ವಿಷಯ ತಿಳಿಯುತ್ತವೆ. ಕೃತಿಯ ಲಿಪಿಕಾರನ ಕಾಲ, ಪ್ರತಿ ಬರೆಸಿದವರ ವಿಷಯ ಮುಂತಾದ ಸಂಗತಿಗಳು ತಿಳಿಯುತ್ತವೆ. ಅಪೂರ್ಣ ಕೃತಿಗಳಲ್ಲಿ 'ಅಂತ್ಯ' ಲಭ್ಯವಿಲ್ಲದಿರಬಹುದು. ಆಗ ಕೃತಿಯಬಗ್ಗೆ ಅನೇಕ ಸಂದೇಹಗಳುಂಟಾಗುವ ಸಂಭವವಿದೆ.

ಹಸ್ತಪ್ರತಿಗಳಲ್ಲಿ ಆದಿ-ಅಂತ್ಯಗಳು ಉದ್ಧರಣ ಭಾಗಗಳು ಮತ್ತು ನಡುವಣ ವಿಷಯ (ವಸ್ತು) ಎಂಬ ಭಾಗವು ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿಗಳಲ್ಲಿ ಉಳಿದೆಲ್ಲ ಸೂಚಿಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಗಮನಿಸಬೇಕಾದ ಸಂಗತಿಆಗಿದೆ. ಉಳಿದ ಸೂಚಿಗಳಲ್ಲಿ ಕಾವ್ಯ ವಿದ್ದಾಗ ಒಂದೆರಡು ಪದ್ಯ ಉಲ್ಲೇಖಿಸಿದರೆ ಕ.ಸಂ.ಸಂ.ಸೂಚಿಯಲ್ಲಿ ಹಲವಾರು ಹತ್ತಾರು ಪದ್ಯಗಳನ್ನು ಸಂಪಾದಕರು ಉದ್ಧರಿಸುತ್ತಾರೆ. ಉದಾಹರಣೆಗೆ ಕ.ಸಂ.ಸಂ 4ನೇ ಸಂಪುಟದಲ್ಲಿ ಪುಟ-130-132ರಲ್ಲಿ 60ನೇ ಕ್ರಮಾಂಕದ ಬ್ರಹ್ಮೋತ್ತರ ಖಂಡಕಾವ್ಯದ ಬಗ್ಗೆ 'ಆದಿ' ಭಾಗದಲ್ಲಿ 8 ಷಟ್ಪದಿಗಳನ್ನು ಅಂತ್ಯದಲ್ಲಿ 3 ಷಟ್ಪದಿ ಉದ್ಧರಿಸಿದ್ದಾರೆ.

**13. ಸಂದರ್ಭ:**

ಕ.ಸಂ.ಸಂ. ಹಸ್ತಪ್ರತಿಸೂಚಿಯಲ್ಲಿ ಇವೆರಡೂ ವಿಭಾಗಗಳು ಇರುವುದು ವಿಶೇಷ ಸಂಗತಿ ಆಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಂಸ್ಥೆ ಸ್ಥಾಪನೆ ಆದ ಕಾಲದಲ್ಲಿ ಆರ್.ನರಸಿಂಹಾಚಾರ್ ರಚಿತ ಕವಿಚರಿತೆ ಏಕೈಕ ಅಧಿಕೃತ ಆಕರವಾಗಿತ್ತು ಹಾಗಾಗಿ ಹಸ್ತಪ್ರತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿ ಬರೆದ ನರಸಿಂಹಾಚಾರ್ಯರ ಕವಿಚರಿತೆಯ ಉಲ್ಲೇಖ ಅಗತ್ಯವಾಗಿತ್ತು. ಆರ್.ನರಸಿಂಹಾಚಾರ್ ಅವರು ಹಸ್ತಪ್ರತಿಗಳಲ್ಲೇ ಇರುವ ಕೃತಿಗಳನ್ನೇ ಸಾಕಷ್ಟು ಪರಿಚಯ ನೀಡಿರುವುದರಿಂದ ಇದನ್ನು ಒಂದು ಹಸ್ತಪ್ರತಿಸೂಚಿ ಎಂದೇ ಭಾವಿಸಬಹುದು. ಹಸ್ತಪ್ರತಿ ಆಧಾರದಿಂದ ಸಂಪಾದಿಸಿದ ಕೃತಿಗಳ ಪ್ರಸ್ತಾಪವೂ ಇಲ್ಲಿವೆ. ಹಾಗಾಗಿ ಕೆ.ಆರ್.ಐ. ಸೂಚಿಯಲ್ಲಿ **ಸಂದರ್ಭ** ಎಂಬ ವಿಭಾಗದಲ್ಲಿ ಆಯಾ ಉಲ್ಲೇಖಿತ ಹಸ್ತಪ್ರತಿ ಪ್ರಸ್ತಾಪ ಕವಿಚರಿತೆಯಲ್ಲಿ ಇರುವುದರ ಬಗ್ಗೆ ಮಾಹಿತಿ ಕೊಟ್ಟಿರುವುದು ಅಗತ್ಯವಾಗಿದೆ ಉಳಿದ ಸೂಚಿಯವರೂ ಗಮನಿಸಬೇಕಾದ ಸಂಗತಿ ಆಗಿದೆ.

14. **Remarks:**

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷರ ಆಳ್ವಿಕೆಯಲ್ಲಿ ಇಂಗ್ಲಿಷಿಗೆ ವಿಶೇಷ ಪ್ರಾಶಸ್ತ್ಯವಿತ್ತು. ದೇಶೀಭಾಷೆಗಳ ಪ್ರಕಟನೆಗಳ ವಿವರಗಳನ್ನು ಇಂಗ್ಲಿಷಿನಲ್ಲೂ ತಿಳಿಸಬೇಕಿತ್ತು. ಸಾಮಾನ್ಯವಾಗಿ ಎಲ್ಲ ಗ್ರಂಥಗಳ ಮುನ್ನುಡಿ. ಪೀಠಿಕೆಗಳು ಕನ್ನಡದ ಜತೆಗೆ ಇಂಗ್ಲಿಷಿನಲ್ಲೂ ಇರುತ್ತಿದ್ದವು ಕೆ.ಆರ್.ಐ. ಸೂಚಿಗಳಲ್ಲೂ ಮುನ್ನುಡಿ ಪೀಠಿಕೆಗಳೂ ಕೃತಿಸೂಚಿ, ಕವಿಸೂಚಿಗಳು ಇಂಗ್ಲಿಷ್-ಕನ್ನಡ ಎರಡರಲ್ಲೂ ಇವೆ. ಅದರ ಜತೆಗೆ ಹಸ್ತಪ್ರತಿಗಳ ಬಗ್ಗೆ ವಿವರಗಳನ್ನು ಸಂಕ್ಷಿಪ್ತವಾಗಿ ಇಂಗ್ಲಿಷಿನಲ್ಲಿ ತಿಳಿಸುವ ವಿಭಾಗವನ್ನು ಇಲ್ಲಿ **Remarks** ಶೀರ್ಷಿಕೆಯಲ್ಲಿ ಕಾಣಬಹುದು. ಅನ್ಯಭಾಷೀಯರು ಈ ಸೂಚಿ ಅಗತ್ಯವನ್ನು ಅರಿಯುವಲ್ಲಿ ಈ ಕಾಲಂ ಹೆಚ್ಚು ಉಪಯುಕ್ತವಾಗುತ್ತದೆ. ಭಾರತದ ಬೇರೆಬೇರೆ ಭಾಗಗಳಲ್ಲೂ ರಾಮಾಯಣ, ಭಾರತ, ಭಾಗವತ, ಪುರಾಣ, ಇತ್ಯಾದಿ ಸಂಬಂಧಪಟ್ಟ ವಿಷಯಗಳ ಹಸ್ತಪ್ರತಿಗಳು ದೊರೆಯುವುದರಿಂದ ತೌಲನಿಕ ಅಧ್ಯಯನ ಮಾಡುವವರಿಗೆ ಈ ಕಾಲಂ ತುಂಬ ಅನುಕೂಲವಾಗುತ್ತದೆ. ಆದರೆ ಈ ರೀತಿ ಇಂಗ್ಲಿಷಿನಲ್ಲಿ ಕೊಡುವಪದ್ಧತಿ ಸ್ವಾತಂತ್ರ್ಯಾ ನಂತರ ಕೈಬಿಟ್ಟು ಹೋಯಿತು. ಆದ ಕಾರಣ ಇತರ ಸೂಚಿಗಳಲ್ಲಿ ಇದನ್ನು ಕಾಣುವುದಿಲ್ಲ. 13 ಅಂಶಗಳ ಮಾದರಿ ಗ್ರಂಥ ವಿವರ ನೋಡಿದರೆ ಇಲ್ಲಿಯ ಸೂಚಿಶಿಲ್ಪದ ಸ್ವರೂಪ ನೋಡಬಹುದು.[13]

ಕೆ.ಆರ್.ಐ. ಹಸ್ತಪ್ರತಿಸೂಚಿಯಲ್ಲಿ ಸೂಚಿಸಿಲ್ಪದಲ್ಲಿದ್ದ 13 ಅಂಶಗಳ ಬಗ್ಗೆ ಇದುವರೆಗೆ ಚರ್ಚಿಸಲಾಯಿತು. ಇದರ ಜೊತೆಗೆ ಮತ್ತೆ ಕೆಲವು ಅಂಶಗಳನ್ನು ಪ್ರಸ್ತಾಪಿಸಬೇಕಾಗಿದೆ. ಈ 13 ಸಂಪುಟಗಳು 14 ಮಂದಿ ಸಂಪಾದಕರು ಸಹಸಂಪಾದಕರ ಪರಿಶ್ರಮದಿಂದ ಮೂಡಿಬಂದಿದೆ. ಅವುಗಳ ವಿವರ ಹೀಗಿದೆ. ಮುಂಬೈ ಸರ್ಕಾರವು ಉತ್ತರ ಕರ್ನಾಟಕದ ಪ್ರದೇಶದ ಸಂಶೋಧನೆಗಾಗಿ ಆ ಭಾಗದ ವಿದ್ವಾಂಸರ ಬೇಡಿಕೆಯಂತೆ 1939ರಲ್ಲಿ ಕನ್ನಡ ಸಂಶೋಧನಾ ಸಂಸ್ಥೆಯನ್ನು ಪ್ರಾರಂಭಿಸಿತು. ಆರ್.ಎಸ್.ಪಂಚಮುಖಿಯವರ ನಿರ್ದೇಶನದಲ್ಲಿ ಕಾರ್ಯವನ್ನು ಪ್ರಾರಂಭಿಸಿದ ಈ ಸಂಸ್ಥೆ ಶಾಸನ, ನಾಣ್ಯ, ತಾಳೆಗರಿ, ವಿಗ್ರಹ, ಕಾಗದಪ್ರತಿ, ಸಂಗ್ರಹಮಾಡಿತು. ಆನಂತರ ಸುಮಾರು 3000 ಹಸ್ತಪ್ರತಿಗಳ ಸಂಗ್ರಹದ ಹಸ್ತಪ್ರತಿ ಸೂಚಿಮಾಡಲು ಪ್ರಾರಂಭಿಸಿ 13 ಸಂಪುಟಗಳನ್ನು ಪ್ರಕಟಿಸಿದೆ. ಇನ್ನೂ ಒಂದು ಸಂಪುಟ ಪ್ರಕಟವಾಗಬೇಕಿದೆ.

ಸಂಪುಟ.01–ಆರ್.ಎಸ್.ಪಂಚಮುಖಿ– ಸಹಸಂಪಾದಕರು ಎ.ಎಮ್.ಅಣ್ಣಿಗೇರಿ

ಸಂಪುಟ.02–ಪ್ರೊ.ಎಸ್.ಎಸ್.ಮಾಳವಾಡ, ಬಿ.ಎಸ್.ಕುಲಕರ್ಣಿ

ಸಂಪುಟ.03–ಶ್ರೀ.ಬಿ.ಎಸ್.ಕುಲಕರ್ಣಿ, ಡಾ॥ ಬಿ.ಎ.ಸಾಲತೊರೆ.

ಸಂಪುಟ.04–ಎ.ಎಮ್.ಅಣ್ಣಿಗೇರಿ. ಎಸ್.ಬಿ.ಪುರೋಹಿತ.

ಸಂಪುಟ.05–ಡಾ॥.ಪಿ.ಬಿ.ದೇಸಾಯಿ. ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ.06–ಡಾ॥.ಪಿ.ಬಿ.ದೇಸಾಯಿ. ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ.07–ಡಾ॥.ಪಿ.ಬಿ.ದೇಸಾಯಿ. ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ.08–ಡಾ॥.ಪಿ.ಬಿ.ದೇಸಾಯಿ. ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ.09–ಡಾ॥.ಪಿ.ಬಿ.ದೇಸಾಯಿ. ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ.10–ಬಿ.ಎಸ್.ಕುಲಕರ್ಣಿ, ಎಸ್.ಬಿ.ಪುರೋಹಿತ.

ಸಂಪುಟ11–ಡಾ॥.ಬಿ.ಎಸ್.ಕುಲಕರ್ಣಿ, ಸಿ.ಬಿ.ಕಡಕೋಳ, ಕೆ.ಪಿ.ಈರಣ್ಣ.

ಸಂಪುಟ12–ಡಾ॥.ಬಿ.ಎಸ್.ಕುಲಕರ್ಣಿ, ಸಿ.ಬಿ.ಕಡಕೋಳ, ಕೆ.ಪಿ.ಈರಣ್ಣ.

ಸಂಪುಟ13–ಡಾ॥.ಎಸ್.ಎಂ.ವೃಷಭೇಂದ್ರಸ್ವಾಮಿ, ಸಿ.ಬಿ.ಕಡಕೋಳ, ಕೆ.ಪಿ.ಈರಣ್ಣ.

ಕನ್ನಡ ಸಂಶೋಧನ ಸಂಸ್ಥೆಯ 13 ಸಂಪುಟಗಳಲ್ಲಿ ಉಲ್ಲೇಖಿತವಾಗಿರುವ ಆದರೆ ಕವಿಚರಿತೆಯಲ್ಲಿ ಇಲ್ಲದ ಗ್ರಂಥಗಳ ಪಟ್ಟಿಯನ್ನು ಕಂಡಾಗ ಅ ಪ್ರಕಟಿತ ಹಸ್ತಪ್ರತಿಗಳು ಸಾಕಷ್ಟಿರುವುದನ್ನು ಈ ಸೂಚಿಗಳು ಸೂಚಿಸುತ್ತವೆ. ಇದು ಹಸ್ತಪ್ರತಿ ಭಂಡಾರದ ಮೌಲ್ಯದ ಹಿರಿಮೆಗೆ ಕಾರಣವಾಗಿದೆ. ಎಷ್ಟು ಬಗೆಯ ಅನುಕ್ತ ಕವಿಚರಿತೆಯ ಗ್ರಂಥಗಳಿವೆ ಎಂಬುದನ್ನು ಈ ಕೆಳಗಣಪಟ್ಟಿಯಲ್ಲಿ ಕಾಣಬಹುದು.

ಸೂ.ಸಂ.01– ದೇವರದಾಸಿಮಯ್ಯ ಪುರಾಣ, ಪಾಂಡವಪ್ರತಾಪ, ಷಟಸ್ಥಲದನಾಂದ್ಯೆ, ಸಿದ್ದೇಶ್ವರ.ಪು.ನಾಂದ್ಯೆ, ಚನ್ನಬಸವಪುರಾಣದ.ನಾಂದ್ಯೆ, ವೀರಶೈವಾಮೃತಪುರಾಣ, ಶಂಕರಸಂಹಿತೆಯ.ನಾಂದ್ಯೆ, ಚೇರವುಕಾವ್ಯದನಾಂದ್ಯೆ, ಪ್ರಭುದೇವರನಾಂದ್ಯೆ, ಸಿದ್ದೇಶ್ವರ.ಪು.ನಾಂದ್ಯೆ, ಮಲ್ಲೇಶ್ವರನನಾಂದ್ಯೆ, ಶಿವಲಿಂಗಮಹಿಮಾಷಟ್ಪದಿ, ನೀಲಾಂಬಿಕಾಲಲಿತ ಸ್ತೋತ್ರ, ಕ್ರಿಯಾಶಕ್ತಯ್ಯಗಳವಾರ್ಧಕ, ನಿಂಬದೇವಸಾಮಂತನೀತಿ, ಜಿನಗುಣಸಂಪತ್ತಿಯ ಸೂಬಾಕ್ರಮ, ಕಾಲಜ್ಞಾನವಾಸುಪೂಜಾ, ಚಾರಣಾಷ್ಟಕ, ವ್ರತಸ್ವರೂಪ, ಶ್ರಾವಕನೆಲೆ, ಷೋಡಶಭಾವನೆ, ಮುಕ್ತಾವಲಯಾರಾಧನೆ, ಬ್ರಹ್ಮವಿದ್ಯಾವಿಧಿ, ಭಗವದ್ಗೀತೆ, ಯಾಜ್ಞವಲ್ಕ್ಯ ಧರ್ಮಶಾಸ್ತ್ರ.

ಸಂ.02– ಆದಯ್ಯಗಳವಾರ್ಧಕ, ಚಂದ್ರಲೇಖಾವಸಂತಶತಕ, ದೇವರದಾಸಿಮಯ್ಯ ಪುರಾಣ, ಧರ್ಮಶರ್ಮಾಭ್ಯುದಯ, ಪ್ರಭುದೇವರನಾಂದ್ಯೆ, ಮಡಿವಾಳಪ್ಪನಕಾವ್ಯ, ಮಹಾಕೂಟದಮಹತ್ವ, ಮೋಹನತರಂಗಿಣಿಕೃಷ್ಣಚರಿತ, ಶುಕಮುನಿಚಾರಿತ್ರ ಸದಾಶಿವನೀತಿ.

ಸಂ.03–ಏಕೋದೇವ ಪ್ರತಿಷ್ಠಾತ್ರಿವಧಿ, ಮಹಿಮ್ನಸ್ತೋತ್ರ, ಮಲಯರಾಜಸ್ತೋತ್ರ, ಅನಾಮಯಸ್ತೋತ್ರ, ಹಲಾಯುಧಸ್ತೋತ್ರ, ಗಣನಾಮಸ್ತೋತ್ರತ್ರಿವಿಧಿ, ಮುದ್ವೀರಸ್ವಾಮಿಗಳು ನಿರೂಪಿಸಿದ ನಚನ, ಷಡಕ್ಷರಸ್ವಾಮಿಗಳವಚನ, ವಾತುಲಾಗಮ, ಶಾಂತವೀರನಾಂದ್ಯೆಪದ, ಭಗವದ್ಗೀತಾಕೆಲವುಕಥೆಗಳು, ಗಂಗೆಗಿರಿಜೆಸಂವಾದ, ದೇವೀಮಹಾತ್ಮೆ, ಪುರಾತನಕಾಲಜ್ಞಾನ ಗಣಿತ ಭಾಷಾಮಂಜರಿಟೀಕು.

ಸಂ.04–ವೃಷಭೇಂದ್ರ ವಿಜಯ, ಚನ್ನಬಸವೇಶ್ವರಪುರಾಣದನಾಂದ್ಯೆ, ಮಲ್ಲೇಶ್ವರನನಾಂದ್ಯೆ, ಲಿಂಗಪುರಾಣದನಾಂದ್ಯೆ, ವೀರಶೈವಾಮೃತಪುರಾಣ, ಬಸವೇಶ್ವರ.ಪು.ನಾಂದ್ಯೆ, ಪಂಚಾಶಿಕಾಗಮದನಾಂದ್ಯೆ, ಮೂಲಕಾಸುರಕಾಳಗ, ಆಶಾಧರಸಂಹಿತಸಾರಸಂಗ್ರಹ, ಮಹಾಭಿಷೇಕ, ಸಂಸ್ಕೃತಸುಭಾಷಿತ, ಮಂಗಳಾರತಿಪದ, ಸಾಂಬಸ್ತುತಿ ಉಡುಪಿಚಂದ್ರವೌಳೀಶ್ವರಸ್ತೋತ್ರ ಪದ, ದ್ರೌಪದೀವಸ್ತ್ರಾಪಹರಣ, ಮಹಾಭಾರತಹದಿನೆಂಟುಪರ್ವವಿಷಯಸಾರ, ದಾಸರಪದ ಸಂಗ್ರಹ, ಶೋಭಾನೆಪದಸಂಗ್ರಹ, ದೇವರವೈದ್ಯ, ಷಟ್ಚಕ್ರಭೂಚಕ್ರ ಕಾಲಚಕ್ರ, ಭೂತಕಾಲಂಕಾರಭಾವಫಲ, ಶಿವಾನುಭವಸಿದ್ಧನೀತಿ,

ಸಂ.05–ಅಕ್ಕಗಳವಚನ, ಅಕ್ಷರಪ್ರಶ್ನೆ, ಅಕ್ಷರಮಾಲಿಕಾಗದ್ಯೆ, ಅಕ್ಷರಾಂಕನಗದ್ಯೆ, ಅಕಾರಾದಿನಿಘಂಟು, ಅಕ್ರೂರಾನುಭವ, ಅನುಭವಪದಗಳು, ಅಷ್ಟೋತ್ತರಶತನಾಮಗದ್ಯ, ಕಾರಕರೂಪು, ಗಜೇಂದ್ರಮೋಕ್ಷ, ಝೇಂಕಾರನಿಜಲಿಂಗಶತಕ, ಧನಂಜಯನಿಘಂಟು, ನಮಸ್ಕಾರಗದ್ಯ ಪಂಚಾಕ್ಷರಿಸ್ತೋತ್ರ, ಮಜ್ಜನನೀಡುವಮಂತ್ರ, ಮಲಯರಾಜಸ್ತೋತ್ರ, ವೃಷಭಕವಚ, ಶಾರದಾಚೌಪದನ, ಶ್ರಾವಕಾಚಾರ, ಸಂಗ್ರಹಗ್ರಂಥ, ಹಾಡಿನಸಂಗ್ರಹ.

ಸಂ.06–ಅನುಭವಾಮೃತ, ಅಪ್ರತಿಮವೀರಚರಿತೆ, ಅಭಿನವಪಂಚತಂತ್ರ, ಅಭಿಮನ್ಯುವಿನಕಾಳಗ, ಅರುಹಿನಷಟ್‌ಸ್ಥಲವಚನ, ತತ್ವಸಾರಾಮೃತ ನಿರಾಲಂಬಪ್ರಭುದೇವರವಚನ, ಪ್ರಮಥಮಹಿಮೆ, ಶ್ರೀರುದ್ರಟೀಕೆ, ರುದ್ರಮಂತ್ರ, ಲಿಂಗತ್ರಿವಿಧಿನೀತಿ, ವಿರಾಟಪರ್ವದುಂದುಮೆ, ಸೀತಾಸ್ವಯಂವರ, ಹಾಡಿನಸಂಗ್ರಹ.

ಸಂ.07–ಭಾವಚಿಂತಾರತ್ನದೊಳಗಣ ಪದದನುಡಿ, ಮನೋವಿಕಾರದರಗಳೆ, ಮರುರಾಮ ವಿಜಯವೀರಭದ್ರವಡಬ, ಸಿದ್ಧೇಶ್ವರನವಾರ್ಧಿಕ, ಜ್ಞಾನಚಂದ್ರನಕಥೆ.

ಸಂ.08–ಅಮರಸಿಂಹನನಾಚಿರಾಜ, ಅಘೋರಮಂತ್ರ, ಅದಯ್ಯಗಳುಉಯ್ಯಾಲೆಪದ, ಅದಯ್ಯಗಳಕಂದ, ಅದಯ್ಯಗಳಮುಕ್ತಿಕ್ಷೇತ್ರ, ಆದಯ್ಯಗಳಸ್ವರವಚನ, ಆದಿಶೆಟ್ಟಿಪುರಾಣ, ಆನಂದಕಲ್ಲೋಲ, ಆಯುರ್ವೇದಔಷಧ, ಆಸ್ಥಾನಜ್ಯೋತಿ, ಉದ್ಧರಣೆಯಪಟಲ, ಉದ್ಯೋದಪ್ರಜ್ಞೆ, ಎಲ್ಲಪುರಾತನಸ್ತೋತ್ರವಚನ, ಐರಾವತಚತುರ್ವಿದಶಂತಿ, ತೀರ್ಥಂಕರಕಿರಿದಾದ ಪಂಚಕಲ್ಯಾಣ, ಪರಮರಹಸ್ಯ, ಪ್ರಾಣಲಿಂಗ ಜ್ಞಾನದರ್ಪಣಚಾರಿತ್ರ್ಯ, ಶಾಂತಿನಾಥನಚರಿತೆ.

ಸಂ.09–ಐರಾವತ, ಒಗಟುಗಳು. ಕದಂಬನಚರಿತೆ, ಕನಕದಾಸರಕೀರ್ತನೆ, ಕನಕಾಂಗಿ ಕಲ್ಯಾಣ, ಕರಿವೀರಭದ್ರಅಂಕಿತ, ಕವಿಕಂಠಾಭರಣ, ಕಾಡದೇವರಕಾಲಜ್ಞಾನ, ಕಾಮಶಾಸ್ತ್ರ, ಕ್ರಿಯಾಶಕ್ತಯ್ಯಗಳವಾರ್ಧಿಕ, ಕೀರ್ತನೆಗಳು, ಕುಸ್ತಿಆಗಮ, ಕುಸ್ತಿಆಗಮಶರಣಪದ, ಕೃಷ್ಣಕಥೆ, ಕೃಷ್ಣಲೀಲಾನಾಟಕ, ಕೃಷ್ಣಾರ್ಜುನಕಾಳಗ, ಕೃಷ್ಣಾರ್ಜುನದುಂದುಮೆ, ಲಾವಣಿ, ಕೈವಲ್ಯಕಲ್ಪಿತ, ಕೋಳೂರುಕೊಡಗೂಸು, ಕಂಸಾಸುರವಧ, ಗಜಲಕ್ಷಣ, ತಾರಕಗುರೂಪದೇಶ, ತುರಗಲಕ್ಷಣ, ಮಂಚಣ್ಣನವಚನ, ಸುಗ್ರೀವಪಟ್ಟಾಭಿಷೇಕ,

ಸಂ.10–ಗುರುಪಾದಪೂಜಾ, ಗುರುಲಕ್ಷಣ, ಘಟೋತ್ಕಚನಕಾಳಗ ಚನ್ನಕ್ಕನಚರಿತ್ರೆ, ತ್ರಿಪುರದಹನಸಾಂಗತ್ಯ, ಮಾರಿಮುಖನಕಾಳಗ, ಹರಳಯ್ಯನಸಾಂಗತ್ಯ.

ಸಂ.11–ಕೀರ್ತನೆಗಳು, ಚನ್ನಬಸವೇಶ್ವರನವಾರ್ಧಿಕ, ಚನ್ನಷಡಕ್ಷರಿಲಿಂಗದಪದ, ಚಾಣಕ್ಯನೀತಿ, ಚಿಕ್ಕನೀಲಮ್ಮನವರಸ್ತೋತ್ರ, ಚಿತ್ರದಪುಸ್ತಕ, ಚಿತ್ರಶೇಖರನಚೌಪದನ, ಚಿದಾನಂದಲಹರಿ, ಬಸವಾಷ್ಟೋತ್ತರಶತನಾಮೋತ್ಸವ, ಜ್ಯೋತಿಷ್ಯಗ್ರಂಥ, ನಗರದ ಸೀಮೆಯಶಾಸನ, ನಿಜಶರಣನತ್ರಿವಿಧಿಪದಗಳು, ವೈದ್ಯವಿಜಯ, ಲೆಕ್ಕಗಳು, ಸಂವತ್ಸರಗಳು, ಶಾಂಭವಯೋಗ ಶಿವಸ್ತೋತ್ರಷಟ್ಪದಿ, ಶಿವಭಕ್ತಿಪದಗಳು, ಶಿವಸ್ತೋತ್ರ, ಸಭಾಪತಿಲಕ್ಷಣ, ಸೊನ್ನಲಾಪುರದ ಸಿದ್ಧರಾಮೇಶ್ವರದೇವರು ನಿರೂಪಿಸಿದಕಾಲ, ಜ್ಞಾನವಚನ, ಪರಿಹರದಕೈಫಿಯತ್ತು, ಹೊಳೆಹೊನ್ನೂರು ಕೈಫಿಯತ್ತು ಶಕುನವಾರ್ಧಿಕಾ.

ಸಂ.12–ಅಮರಕೋಶ, ಅಮ್ಮಾವತಾಯಿಪದ, ಅಂಗುಲಿಜಪ, ಇಂದ್ರಾಕ್ಷಿಸ್ತೋತ್ರ, ಕಾಲಚಕ್ರ, ಕೋಕಶಾಸ್ತ್ರ, ಗಾರ್ಗಿನಾರದಸಂವಾದ, ಗುರುಗೀತಾಲಿಖಿತೇ, ಚಂದ್ರಪ್ರಭಚರಿತೆ, ಛಲವಾದಿಯವರಉತ್ಪತ್ತಿ, ಜನನಕಾಲದ ನಕ್ಷತ್ರಫಲ. ಜಯಸಂವತ್ಸರಪಂಚಾಂಗ, ಜೈನರಚೌಪದನ ಜೋಗುಳದವಚನ, ತ್ರೈವರ್ಣಿಕಾಚಾರ, ದೇವಿಅಷ್ಟೋತ್ತರನವಗ್ರಹಾರಾಧನ ಕ್ರಮ, ನಿಷ್ಕಲಿಂಗಚಿದಾನಂದಲೀಲೆ ಪದಗಳು, ಪಂಚಾಕ್ಷರಿಮಂತ್ರದ ಮಹಿಮೆ, ಪಂಚವಕ್ತ್ರಷಡಕ್ಷರ ನಮಸ್ಕಾರ, ಪ್ರಭುದೇವರನಟನಾಟಕ, ಪಾಣಿಮಂತ್ರಪೀಠಿಕೆ, ಬೆಡಗಿನ ಚೌಪದನ, ಭೂಚಕ್ರ, ಮದಲುಖಡಿಗ್ರಂಥ, ರಾಮಚಂದ್ರ, ಮೇಘಚಕ್ರ, ರುದ್ರಕವಚ ರುದ್ರಾಕ್ಷಿಸ್ಥಲದವಚನ, ವಿಶ್ವನಾಥಾಷ್ಟಕ, ಚಂದ್ರಶೇಖರಾಷ್ಟಕ, ವಿವಾಹವಿಧಿ, ವೀರಸಂಗಯ್ಯನಚೌಪದನ, ವೈದ್ಯಚಿಂತಾಮಣಿ, ಶಿಖಾರತ್ನಪ್ರಕಾಶವು ಶಿವಮಂಗಳಾರತಿಪದ ಶಿವಶಂಕರ ಸ್ತೋತ್ರಮಂಗಳಾರತಿ ಪದಗಳು, ಶೀನಶಕುನ ಪಂಚಾಂಗ, ಶ್ರೀಗಂಧ, ಶಾಂಭವಚಕ್ರಪದ, ಹಲ್ಲಿಬಿದ್ದಶಕುನ.

ಸಂ.13–ಇಷ್ಟಲಿಂಗೇಶ್ವರವಚನ, ಗಂಗೆಗೌರಿಚೌಪದನ, ಜಾತಕಾಲಂಕಾರಭಾವಫಲ, ಜಾತಕಪದ್ಧತಿ, ಜಾನಪದಗೀತೆಗಳು, ಜಿನಸ್ತೋತ್ರಗಳು, ಜೈನಪೂಜಾವಿಧಾನಂ, ಜ್ಯೋತಿಷ್ಯಗ್ರಂಥ, ತರ್ಕದೀಪಿಕಾ, ತತ್ವಪದಗಳು, ತತ್ವವಿಭಾಗ, ತತ್ವವಿಜ್ಞಾನಪ್ರದೀಪ, ತತ್ವಾರ್ಥವ್ಯಾಖ್ಯಾನ, ತಂತ್ರಗಳು, ತಾತ್ಪರ್ಯಸಂಗ್ರಹ, ನವಚಕ್ರಮಂತ್ರವಿವರ, ನೀತಿಗ್ರಂಥ ಮಂಗಳಾರತಿಪದ, ಲಗ್ನದಮಂಗಳಾಷ್ಟಕ, ಮಹರ್ದಶಿಶ್ಲೋಕ, ವಿಘ್ನೇಶ್ವರನಚೌಪದನ, ಹಲವುಸಂಸ್ಕೃತಶ್ಲೋಕ, ನಕ್ಷತ್ರಫಲ.

## ಅಡಿಟಿಪ್ಪಣಿಗಳು

1. ದೇಶಪಾಂಡೆ.ಕೆ.ಎಸ್.ಜ್ಞಾನದೇಗುಲ, ಕರ್ನಾಟಕ ವಿಶ್ವವಿದ್ಯಾಲಯ 1999 ಪ್ರಕಟನೆ ಕ.ವಿ.ವಿ.ಧಾರವಾಡ.ಪುಟ 38

2. ಹಳ್ಳಿಕೇರಿ ಎಫ್.ಟಿ. ಹಸ್ತಪ್ರತಿವ್ಯಾಸಂಗ–2 2002 ಕನ್ನಡ ವಿಶ್ವವಿದ್ಯಾಲಯ. ಹಂಪಿ. ಪುಟ–64

3. ಉದಾಹರಣೆಗೆ ನೋಡಿ: ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಶ್ರವಣಬೆಳಗೊಳ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿ, ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಇತ್ಯಾದಿ.

4. ನೋಡಿ: ಶ್ರವಣಬೆಳಗೊಳ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಓರಿಯಂಟಲ್ ರಿಸರ್ಚ್ ಇನ್ಸ್ಟ್ಯೂಟಿನ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ ಸಂಪುಟಗಳು 1,2,3, ಇತ್ಯಾದಿ.

5. ನೋಡಿ; ಜಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಸಂಸ್ಥೆಯ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿ ಪುಟ–30
ವಿಶೇಷವಿಷಯ: ಅಸಮಗ್ರ; 11ನೇ ಗರಿಯಿಂದ 23ನೇ ಗರಿಯವರೆಗೆ ಇದೆ........ಅಲ್ಲಲ್ಲಿ ತೆಲುಗುಕೀರ್ತನೆಗಳು ಇವೆ.

6. ಉದಾಹರಣೆಗೆ. ಕನ್ನಡ ವಿಶ್ವವಿದ್ಯಾಲಯ ಕನ್ನಡ ಹಸ್ತಪ್ರತಿಸೂಚಿಯಲ್ಲಿ (ಸಂಪುಟ3 ಪುಟ75) ಕಾ.ಪ್ರ ಎಂದು ಕಾಗದಪ್ರತಿಗೆ (ಪುಟ 136 ಸಂಪುಟ3) ತಾ.ಪ್ರ ಎಂದು ತಾಳೆಗರಿಪ್ರತಿಗೂ ಸಂಕೇತ ಬಳಸಿದೆ.

7 ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚಿ (ಸಂಪುಟ3) ಪೀಠಿಕೆ.

8. ಕೆ.ಆರ್.ಐ–ಸಂಪುಟ 10 ಪುಟ 21 ಕ್ರ.ಸಂ.8 ಗಿರಿಜಾಕಲ್ಯಾಣ.

9. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಸೂಚಿ; ಸಂಪುಟ 6ರಲ್ಲಿ ಪುಟ 111ರಲ್ಲಿ ಕ್ರಮಾಂಕ 130 ಪಂಚೀಕರಣದ ಟೀಕು ಗ್ರಂಥದ ವಿವರದ ಭಾಗದಲ್ಲಿ ವಿಶೇಷ ಶೀರ್ಷಿಕೆಯ ವಿವರ ಹೀಗಿದೆ.
   ಸಮಗ್ರ: ಉತ್ತಮ: ಅಕ್ಷರದೊಡ್ಡಪ್ರಮಾಣ, ದುಂಡಗೆ, ಸುಂದರ.

10. ಬೆಂ.ವಿ.ವಿ.ದಸೂಚಿಯಲ್ಲೂ ಸ್ಥಳಸೂಚಿಇಲ್ಲ

11. ನೋಡಿ: ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿಸೂಚಿ, ಹಂಪಿ ಕ.ವಿ ಹಸ್ತಪ್ರತಿಸೂಚಿ. ಬೆಂ.ವಿ.ವಿ ಕ.ಹಸ್ತಪ್ರತಿಸೂಚಿ ಇತ್ಯಾದಿಗಳು

12. ವೀರಶೈವ ಹಸ್ತಪ್ರತಿ ಪುಷ್ಟಿಕೆ: ಎಸ್.ಶಿವಣ್ಣ 1994 ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಗದಗ.
    ಮೊದಲಮಾತು ಇದರಲ್ಲಿ ಅನುಸರಿಸಿರುವ ಸೂಚಿಶಿಲ್ಪದ ವಿವರಗಳಿವೆ.

13. ಸಂಪುಟ 7ರ ಕೃತಿಸೂಚಿಯ ಮಾದರಿ ಹೀಗಿದೆ.

**ಕನ್ನಡ ಸಂಶೋಧನ ಸಂಸ್ಥೆ ಧಾರವಾಡ**

ಸಂಪುಟ.07. ಪದ್ಯ.29. ನಮಸ್ಕಾರಗದ್ಯ

ವಸ್ತು :– ತಾಡೋಲೆ

ಅಂಕ :–1219(**x vi)c**

ಆಕಾರ :– $9\,^1/_4$ **x** $1^1/_3$

ವಿವರ :–ಈಗ್ರಂಥದ 109ನೆಯ ಓಲೆಯಲ್ಲಿ ಆರಂಭವಾಗಿ 110ನೆಯ ಓಲೆಯಲ್ಲಿ ಮುಗಿದಿದೆ. ಓಲೆಯ ಎರಡೂ ಬದಿಗಳಲ್ಲಿ ಬರಹವಿದೆ. ಒಂದೊಂದು ಬದಿಯಲ್ಲಿ 11 ಸಾಲುಗಳಿದ್ದು ಪ್ರತಿಸಾಲಿನಲ್ಲಿ 63–64 ಅಕ್ಷರಗಳಿವೆ ಅಕ್ಷರಗಳು ಸ್ಪಷ್ಟವಿಲ್ಲ.

ದೊರೆತಸ್ಥಳ:– ಶಿರಸಿ

ಕಾಲ :– ಸು–18ನೆಯ ಶತಮಾನ

ಕರ್ತೃ :– ಪಾಲ್ಕುರಿಕೆ ಸೋಮನಾಥ

ವಿಷಯ :- ಈ ಗ್ರಂಥದಲ್ಲಿ ಬಸವೇಶ್ವರನನ್ನು ಕುರಿತು ಅಷ್ಟೋತ್ತರ ಶತನಾಮಗಳಿಂದ ಸ್ತುತಿಸಿ ನಮಸ್ಕಾರ ಮಾಡಿದ ಗದ್ಯ ಪದ್ಯಗಳಿವೆ.

ಶೈಲಿ :- ಗದ್ಯ ಪದ್ಯ

ಆರಂಭ:- ನಮಸ್ಕಾರ ಗದ್ಯ

ವೃತ್ತ

ಶ್ರೀಕಂಠೋದ್ಭವವೇದಚೋದಿತಲಸದ್ವೀರವ್ರತಃಪ್ರಕ್ರಿಯಾ
ಚರ್ಯಾದೇಶಿಕದೇಶಿಕಾಯಭುವನಸ್ತುತ್ಯಾಯನಿತ್ಯಾಯ
ದ್ಭಾಂಡಾಗಾರ ಧುರಂಧರಾಯ ಸುಮಹದ್ರುದ್ರಾಯ ಭದ್ರಾಸಯತೇ
ಸಾಕ್ಷಾಚ್ಛ್ರೀವೃಷಭಾಧಿಪಾಂಶಬಸವಾಧೀಶಾಯತಸ್ಮೈನಮಃ

ಸಮಾಪ್ತ:- ಕಂದ॥

ಸರಸ ನಮಸ್ಕೃತಿ ಗದ್ಯಾ
ತರಪದಮಣಿಖಚಿತವಾಕ್ಸುವರ್ಣಾಬ್ಜಾಷ್ಟೋ।
ತ್ತರಶತ ಕುಸುಮಂಗಳ ಬಸ
ವರಸರಿಗರ್ಪಿಸಿದ ಪಾಲ್ಕುರಿಕೆಯ ಸೋಮಾಂಕಂ॥
ನಮಸ್ಕಾರ ಗದ್ಯ ಸಮಾಪ್ತ
ಮಂಗಳ ಮಹಾ ಶ್ರೀ॥ಶ್ರೀ॥ಶ್ರೀ॥

ಸಂದರ್ಭ:-ಕವಿಚರಿತೆ ಭಾಗ 1 ಪುಟ-291

**Remarks:-**The name of this palm leaf manuscript work of about the 18 century is namaskara Gadya by palukurike Somnatha the work is in praie Basaveswara.

# ಅಧ್ಯಾಯ –5

# ಕನ್ನಡ ಅಧ್ಯಯನ ಪೀಠದ ಕನ್ನಡ ಹಸ್ತಪ್ರತಿಸೂಚಿಗಳು

## ಇತಿಹಾಸ:

ನಮ್ಮ ನಾಡಿನ ಹಸ್ತಪ್ರತಿಭಂಡಾರಗಳಲ್ಲಿ ಪ್ರಸಿದ್ಧವೂ ಅಪೂರ್ವವೂ ಆದ ಭಂಡಾರಗಳಲ್ಲಿ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಭಂಡಾರ ಒಂದಾಗಿದೆ. 1962 ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಥಮ ಭಾಗವಾಗಿ ಪ್ರಾರಂಭವಾಯಿತು. ಡಾ.ಆರ್.ಸಿ.ಹಿರೇಮಠ ಅವರ ಕನಸುಗಳು ಸಾಕಾರವೆನಿಸಿದ "ಸಮಗ್ರ ವಚನ ವಾಙ್ಮಯ ಸಂಶೋಧನ ಸಂಸ್ಕರಣ ಮತ್ತು ಪ್ರಕಟನ ಯೋಜನೆ" ಅವರ ನಿರ್ದೇಶನದಲ್ಲಿ ರೂಪುಗೊಂಡಿತು.

"ಪುಣೆಯ ಭಂಡಾರಕರ ಸಂಶೋಧನಸಂಸ್ಥೆ ಕೈಗೊಂಡಿದ್ದ ಮಹಾಭಾರತ ಸಂಸ್ಕರಣ ಪ್ರಕಟನೆ ಯೋಜನೆಯ ಮಾದರಿಯಲ್ಲಿ ವಿಶ್ವವಿದ್ಯಾನಿಲಯದ ಪ್ರಕಟನೆ ಯೋಜನೆಯ ಮಾದರಿಯಲ್ಲಿ ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದ ನೆರವಿನಿಂದ ಸ್ಥಾಪಿತಗೊಂಡ ಈ ಮಹಾಯೋಜನೆಯ ಪ್ರಾರಂಭದ ಹಂತದಲ್ಲಿ ಕೇವಲ ಇಬ್ಬರು ಸಹಾಯಕ ಸಂಶೋಧಕರಿಂದ ಕಾರ್ಯ ಪ್ರಾರಂಭವಾಯಿತು".[1]

"1966ಕ್ಕೆ ವೀರಶೈವ ಮತ್ತು ಜೈನಶಾಖೆಗಳೂ 1967ಕ್ಕೆ ಬ್ರಾಹ್ಮಣ ಶಾಖೆಯೂ ಕನ್ನಡ ವಿಭಾಗದಲ್ಲಿ ಅಸ್ತಿತ್ವಕ್ಕೆ ಬಂದು ಇಲ್ಲಿ ಹಸ್ತಪ್ರತಿ ಸಂಗ್ರಹ ಮತ್ತು ಸೂಚೀನಿರ್ಮಾಣ ಕಾರ್ಯಗಳು ವಿಶಾಲವ್ಯಾಪ್ತಿ ಹೊಂದಿದವು. ಈ ಸಂಸ್ಥೆಯಲ್ಲಿ ವಿಭಾಗದ ಡಾ.ಆರ್.ಸಿ.ಹಿರೇಮಠ ಡಾ.ಬಿ.ಎಸ್.ಕುಲಕರ್ಣಿ, ಡಾ.ಎ.ಎಸ್.ಸುಂಕಾಪೂರ, ಡಾ.ಎಂ.ಎಂ.ಕಲಬುರ್ಗಿ, ಡಾ.ಕೆ.ಜಿ.ಶಾಸ್ತ್ರಿ, ಅವರು ನಿರ್ದೇಶಕರಾಗಿ ಅನುಪಮ ಸೇವೆಸಲ್ಲಿಸಿದರು.

1972ವರೆಗೆ 10 ವರುಷಗಳ ಅವಧಿಯಲ್ಲಿ " ಕನ್ನಡ 4360 ಸಂಸ್ಕೃತ 565 ಮರಾಠಿ 35 ತೆಲುಗು 38 ತಮಿಳು 6 ಹಸ್ತಪ್ರತಿ ಕಟ್ಟುಗಳು ಸಂಗ್ರಹವಾದವು. 1967ರ ಸುಮಾರಿಗೆ ಡಾ.ಫ.ಗು.ಹಳಕಟ್ಟಿ ಅವರ ಮಕ್ಕಳಿಂದ ಖರೀದಿಸಿದ 1000 ಕಟ್ಟುಗಳು ಸೇರಿ ಭಂಡಾರ ಪ್ರವರ್ಧನವಾಯಿತು. "1992ರಲ್ಲಿ ಕನ್ನಡಸಂಶೋಧನ ಸಂಸ್ಥೆಯ ಎಲ್ಲ ಕಟ್ಟುಗಳು (ಸುಮಾರು3000) ಇಲ್ಲಿಗೆ ಬಂದವು.[2] ಹೀಗಾಗಿ 1992ರ ವೇಳೆಗೆ ಸುಮಾರು

8000 ಕಟ್ಟುಗಳ ಸಂಗ್ರಹವಾಗಿತ್ತು.

**ಸೂಚಿಗಳ ಪ್ರಕಟನೆ**

ಡಾ.ಎಂ.ಎಂ.ಕಲಬುರ್ಗಿಅವರು ಮುಖ್ಯಸ್ಥರಾದ ಕಾಲದಲ್ಲಿ 10 ವಿವರಣಾತ್ಮಕ ಹಸ್ತಪ್ರತಿಸೂಚಿಗಳು ಅಚ್ಚಿಗೆ ಸಿದ್ಧವಾದವು. "ಇವುಗಳಲ್ಲಿ 2,3,4,5 ನೆಯ ಸಂಪುಟಗಳನ್ನು ಹೊರತುಪಡಿಸಿ ಉಳಿದ 6 ಸಂಪುಟಗಳು 1992ರಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ 1ನೇ ಸಂಪುಟ ಡಾ.ಜಿ.ಆರ್.ಹಿರೇಮಠ ಅವರ ಸಂಪಾದಕತ್ವದಲ್ಲೂ 6–10 ಸಂಪುಟಗಳು ಡಾ.ವಿ.ಬಿ.ರಾಜೂರ ಅವರ ಸಂಪಾದಕತ್ವದಲ್ಲೂ ಪ್ರಕಟವಾಗಿವೆ.

ಮುಂದಿನ 1001ರಿಂದ 4000ವರೆಗಿನ ಕಟ್ಟುಗಳ ಸೂಚೀಕಾರ್ಯ ಮುಗಿದಿವೆ. ಆದರೆ ಇದುವರೆಗೂ ಪ್ರಕಟವಾಗಿಲ್ಲ. 1ರಿಂದ10ರ ಒಳಗಿನ 4 ಸಂಪುಟಗಳು ಸಿದ್ಧವಾದರೂ ಪ್ರಕಟವಾಗದ್ದಕ್ಕೆ ಕಾರಣಗಳು ತಿಳಿಯದಾಗಿದೆ. ಇನ್ನು 10ನೇ ಸಂಪುಟದ ನಂತರದ ಸೂಚಿಗಳು ಬರದಿರುವುದು ವಿಷಾದದ ಸಂಗತಿ ಆಗಿದೆ.

**ಗ್ರಂಥಪ್ರಕಟನೆ**

ಇಲ್ಲಿಯ ಹಸ್ತಪ್ರತಿಭಂಡಾರ ಹುಟ್ಟಿದ್ದು ವಚನಸಾಹಿತ್ಯ ಪ್ರಕಟನೆಯ ಯೋಜನೆಯ ಅಂಗವಾಗಿ ಹಾಗೂ ಇಲ್ಲಿ ಸಂಗ್ರಹದಲ್ಲಿ ಅತ್ಯಧಿಕ ಕೃತಿಗಳು ವೀರಶೈವ ಕೃತಿಗಳೇ ಆಗಿವೆ. ಹಸ್ತಪ್ರತಿ ಭಂಡಾರದ ಸಾರ್ಥಕತೆಗೆ ಅಲ್ಲಿರುವ ಹಸ್ತಪ್ರತಿಗಳು ಪರಿಷ್ಕೃತಗೊಂಡು ಅಚ್ಚಾಗಿ ಬರುವುದರಲ್ಲಿದೆ. ಈ ದಿಸೆಯಲ್ಲಿ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯ ಬಿಟ್ಟರೆ ಈ ಭಂಡಾರದ ಪ್ರಕಟನೆಗಳೇ ಅಧಿಕ ಎನ್ನಬಹುದು. ಇಲ್ಲಿರುವ ಓಲೆಗರಿಗಳ ಸಹಾಯದಿಂದ ಪ್ರಕಟವಾದ ಪ್ರಾಚೀನ ಕೃತಿಗಳು ಹೀಗಿವೆ:–

**ವಚನಸಾಹಿತ್ಯದ ಪ್ರಕಟನೆಗಳು:** ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ಶಿವಶರಣೆಯರ ವಚನಗಳ ಸಮಗ್ರ ಸಂಪುಟಗಳು, ಸಕಲ ಪುರಾತನರ ವಚನಗಳ 3 ಭಾಗಗಳು, ಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ, ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ ಮೊದಲಾದ 20ರಷ್ಟು ಪ್ರಾಚೀನ ವಚನ ಸಂಕಲನ ಗ್ರಂಥಗಳು ಇಲ್ಲಿಯ ಹಸ್ತಪ್ರತಿಭಂಡಾರದ ಆಧಾರದಿಂದ ಸಂಗ್ರಹವಾಗಿ ಪ್ರಕಟವಾಗಿವೆ.

ಇವುಗಳಲ್ಲಿ, ತ್ರಿಷಷ್ಠಿಪುರಾತನ ಪುರಾಣ, ಬಸವರಾಜವಿಜಯ, ರಾಜಶೇಖರವಿಳಾಸ, ಅನಂತನಾಥಪುರಾಣ, ಧರ್ಮಾಮೃತ, ಮೋಹನತರಂಗಿಣಿ ಮೊದಲಾದ ಕಾವ್ಯಗಳು ಪ್ರಕಟವಾಗಿವೆ. ಬಸವಣ್ಣನವರ ಟೀಕಿನ ವಚನಗಳು ಎಂಬ ಟೀಕಿನವಚನಸಂಪುಟದ್ವಯ

ಪ್ರಕಟವಾಗಿದೆ. ಇಲ್ಲಿಯ ಹಸ್ತಪ್ರತಿಭಂಡಾರ ಸಕ್ರಿಯವಾಗಿ ಕಾರ್ಯೋನ್ಮುಖವಾಗಿದೆ ಎಂಬುದಕ್ಕೆ ಇಲ್ಲಿಯ ಗ್ರಂಥಪ್ರಕಟನೆಗಳು ಸಾಕ್ಷಿಯಾಗಿವೆ.

**ಸೂಚೀಕರಣಕಾರ್ಯ:–** ಇಲ್ಲಿಯ ಕಾರ್ಯವಿಧಾನವನ್ನು ಎಂ.ಎಂ.ಕಲಬುರ್ಗಿಅವರು ತಮ್ಮ ಮಾರ್ಗ ಸಂಪುಟ 2ರಲ್ಲಿ ಹೀಗೆ ವಿವರಿಸಿದ್ದಾರೆ.

"ಹಸ್ತಪ್ರತಿಸಂಗ್ರಹಯೋಜನೆ"ಯ ಮೂಲಕ ನಾಡಿನ ನಾನಾ ಮೂಲೆಗಳಿಂದ ತಂದ ಈ ಹಸ್ತಪ್ರತಿಗಳನ್ನು ಗರಿಬಿಚ್ಚಿ ಓದಿ ಪುಟತೆಗೆದು ಜೋಡಿಸಿ ಪ್ರತಿಯೊಂದು ಕಟ್ಟನ್ನೂ ಕ್ರಮಗೊಳಿಸಿ ಓರಣವಾಗಿ ಇಡಲಾಗುವುದು. ಆಮೇಲೆ ನಡೆಯುವುದು ಸೂಚೀರಚನಾ ಸಿಬ್ಬಂದಿಯವರ ಕಾರ್ಯ ಇವರು ಸಿದ್ಧಪಡಿಸುತ್ತಿರುವುದು ಹಸ್ತಪ್ರತಿಯ ಅಂತರಂಗ ಬಹಿರಂಗಗಳ ಸಂಕ್ಷಿಪ್ತಪರಿಚಯ, ಕ್ರಮಾಂಕ, ಪುಟ, ಕೃತಿಕರ್ತೃ, ಲಿಖಿತವಸ್ತು, ಲಿಪಿಸಿದಕಾಲ, ಅಳತೆ, ಸಾಲು, ಸ್ಥಿತಿ, ಅಕ್ಷರಸ್ವರೂಪ, ಕೊಟ್ಟವರು ತಂದವರು ಆದಿ, ಅಂತ್ಯ, ವಿಷಯ, ಹೀಗೆ ಹಸ್ತಪ್ರತಿಯ ಪ್ರತಿಯೊಂದು ವಿವರಗಳನ್ನು ಇಲ್ಲಿ ಬರೆಯಲಾಗುವುದು. 100ಕಟ್ಟುಗಳಿಗೆ ಒಂದು ಸಂಪುಟದಂತೆ ಸೂಚಿಗಳನ್ನು ಸಿದ್ಧಗೊಳಿಸುವ ಕಾರ್ಯವನ್ನು ಇಲ್ಲಿ ಕೈಗೊಳ್ಳಲಾಗಿದೆ. ಇವುಗಳ ಪ್ರಕಟನೆಯಿಂದ ಕಾರ್ಯವನ್ನು ಇಲ್ಲಿ ಕೈಗೊಳ್ಳಲಾಗಿದೆ. ಇವುಗಳ ಪ್ರಕಟನೆಯಿಂದ ಇಲ್ಲಿ ಯಾವ ಹೆಸರಿನ ಎಷ್ಟು ಪ್ರತಿಗಳಿವೆ? ಅವುಗಳ ಸ್ವರೂಪವೇನು ಹೊಸಕೃತಿಗಳು ಯಾವುವು? ಇತ್ಯಾದಿ ಸಂಗತಿಗಳು ತಟ್ಟನೆ ಅಭ್ಯಾಸಿಗಳ ಗಮನಕ್ಕೆ ಬರುತ್ತವೆ.[3]

**ಹಸ್ತಪ್ರತಿಗಳ ವೈಶಿಷ್ಟ್ಯಗಳು:–**

ಕನ್ನಡ ಅಧ್ಯಯನ ಪೀಠದ 4000 ತಾಡವೋಲೆ ಮತ್ತು ಕಾಗದದ ಪ್ರತಿಗಳ ವೈಶಿಷ್ಟ್ಯಗಳನ್ನು ಕಲಬುರ್ಗಿ ಅವರು ಹೀಗೆ ಬಣ್ಣಿಸಿದ್ದಾರೆ.[4]

**ಆಕಾರ ಮತ್ತು ಗಾತ್ರ:–**ಇಲ್ಲಿರುವ "ನಾಲ್ಕು ಸಾವಿರ ಹಸ್ತಪ್ರತಿಗಳಲ್ಲಿ ತಾಳೆವೋಲೆ ಮತ್ತು ಕಾಗದ ಪ್ರತಿಗಳ ಪ್ರಮಾಣ 30ರಿಂದ 70 ಅರ್ಧ ಇಂಚು ಅಗಲದಿಂದ 4ಅಡಿ ಉದ್ದನೆಯ, ಒಂದೆರಡು ಪುಟಗಳಿಂದ ಹಿಡಿದು ಒಂದುಸಾವಿರ ಪುಟಗಾತ್ರದ ಕೃತಿಗಳು ಇಲ್ಲಿ ಸಮಾವೇಶವಾಗಿವೆ.

**ಹೆಣ್ಣುಮಕ್ಕಳು ಬರೆದ ಕೃತಿಗಳು:–** ಶಿಗ್ಗಾವಿಯ ಚೆನ್ನಗೌಡರ ಸೊಸೆ ಭೈರಾಜಿಯಂಥ ಹೆಣ್ಣುಮಕ್ಕಳು ಬರೆದ ಹಸ್ತಪ್ರತಿಗಳು ಇಲ್ಲಿವೆ.

**ಸಚಿತ್ರಹಸ್ತಪ್ರತಿಗಳು:–** ಮುದ್ದಾದ ಅಕ್ಷರಗಳ, ಸೂಕ್ಷ್ಮಾತಿಸೂಕ್ಷ್ಮ ಅಕ್ಷರಗಳ ಹಸ್ತಪ್ರತಿಗಳಲ್ಲದೆ. ಕಾವ್ಯದಲ್ಲಿ ನಿರೂಪಿತವಾದ ಘಟನೆಗಳನ್ನು ಚಾಕ್ಷುಷಗೊಳಿಸುವ ಬಣ್ಣಬಣ್ಣದ ಚಿತ್ರವನ್ನೊಳಗೊಂಡ ಹಸ್ತಪ್ರತಿಗಳೂ ನೂರು ಸಂಖ್ಯೆಯಲ್ಲಿ ಸಿಗುತ್ತವೆ.

**ಸುಂದರಸಾಧನಗಳು:–** ಹಸ್ತಪ್ರತಿಗಳ ರಕ್ಷಾಫಲಕ, ಒಳಗಿನ ಪುಟ ಮತ್ತು ಹೊರಗಿನ ಮುಖಪುಟಗಳ ಮೇಲೆ ಬರೆದ ಚಿತ್ರಗಳೂ ಸುಳಿವು ನಕ್ಷೆಗಳೂ ಯೋಗದ ಪ್ರಕಾರ ವಿಧಾನಗಳನ್ನು ಬಿಂಬಿಸುವ ಬಣ್ಣಬಣ್ಣದ ಉದ್ಧರಣೆಗಳೂ, ಬರವಣಿಗೆ ಸಾಧನಗಳು, ಈ ಭಂಡಾರಕ್ಕೆ ಇನ್ನೂ ಹೆಚ್ಚಿನ ಆಕರ್ಷಣೆಯನ್ನು ಒದಗಿಸಿವೆ.

ಇವುಗಳಲ್ಲದೆ ಶರಣರ ಚಿತ್ರ, ವಿಗ್ರಹಗಳು, ಕವಿಗಳ ಶಾಸನಗಳು ಇಲ್ಲಿರುವುದರಿಂದ ಈ ಭಂಡಾರ ವೈಶಿಷ್ಟ್ಯಪೂರ್ಣವಾಗಿದೆ.

**ಪ್ರಕಟಿತಸೂಚಿಗಳ ವಿವರ:–**

ಈಗ ಪ್ರಕಟಿತವಾದ 6 ಸೂಚಿಗಳಲ್ಲಿ ಮೊದಲನೆಯ ಸಂಪುಟ 1984ರಲ್ಲಿ ಸಿದ್ಧವಾಗಿ 1992ರಲ್ಲಿ ಪ್ರಕಟವಾಯಿತು. ಈ 10 ಸಂಪುಟಗಳಲ್ಲಿ 4 ಸಂಪುಟಗಳು ಸಿದ್ಧವಾದರೂ ಅಚ್ಚಾಗದಿರುವುದನ್ನು ಈಗಾಗಲೇ ತಿಳಿಸಲಾಗಿದೆ. ಇನ್ನು 6 ಸಂಪುಟಗಳಲ್ಲಿ ಪ್ರಕಟವಾದ ಹಸ್ತಪ್ರತಿಗಳ ಸಂಖ್ಯೆ ಹೀಗಿದೆ.

| | | | | | | |
|---|---|---|---|---|---|---|
| ಸೂಚಿ–1 ಸಂಪುಟ | – | 354 | – | 325 | ಪುಟಗಳು |
| ಸೂಚಿ–6 ಸಂಪುಟ | – | 367 | – | 316 | ಪುಟಗಳು |
| ಸೂಚಿ–7 ಸಂಪುಟ | – | 306 | – | 300 | ಪುಟಗಳು |
| ಸೂಚಿ–8 ಸಂಪುಟ | – | 279 | – | 263 | ಪುಟಗಳು |
| ಸೂಚಿ–9 ಸಂಪುಟ | – | 397 | – | 366 | ಪುಟಗಳು |
| ಸೂಚಿ–10 ಸಂಪುಟ | – | 245 | – | 222 | ಪುಟಗಳು |
| | | 1948 | | 1792 | ” |

6 ಸಂಪುಟಗಳಲ್ಲಿ 1948 ಗ್ರಂಥಗಳ ಮಾಹಿತಿಯನ್ನು 1792 ಪುಟಗಳಲ್ಲಿ ಕೊಡಲಾಗಿದೆ. ಯಾವ ಸಂಪುಟದಲ್ಲೂ ಕೃತಿಸೂಚಿ, ಕರ್ತೃಸೂಚಿ, ಸ್ಥಳಸೂಚಿ, ಲಿಪಿಕಾರರಸೂಚಿ ಇತ್ಯಾದಿ ಯಾವ ಬಗೆಯ ಸೂಚಿಗಳು ಇಲ್ಲ. ಈ ವಿಷಯದಲ್ಲಿ ಕನ್ನಡ ಸಂಶೋಧನಾ ಸಂಸ್ಥೆಯ ಸೂಚಿಗಳು ಇತರ ಸಂಸ್ಥೆಯ ಸೂಚಿಗಳಲ್ಲಿ ಮೇಲು. ಸಂಪಾದಕರಷ್ಟೇ ಸೂಚಿವಿವರಗಳನ್ನು ಸಿದ್ಧಪಡಿಸಿಲ್ಲ. ಪಂಚಾಕ್ಷರಿ, ಹಿರೇಮಠ, ನಿಜಲಿಂಗಮ್ಮ ಕೊಪ್ಪಳ, ಜಯಪ್ರಕಾಶಕಟ್ಟೀಮನಿ, ಕೆ.ಪಿಎಸ್.ಆರಾಧ್ಯ, ಎಸ್.ಎಸ್.ಭೂಸರೆಡ್ಡಿ, ಬಿ.ಪಿ.ಪಾಟೀಲ,

ಎಸ್.ವಿ.ಅಯ್ಯನಗೌಡ, ಮಧುವೆಂಕಾರೆಡ್ಡಿ, ಜಿ.ಬಿ.ಬಿರಾದಾರ ಮೊದಲಾದವರು ಹತ್ತಾರು ಮಂದಿ ಸೂಚಿವಿವರ ಸಂಗ್ರಹಿಸಿದ್ದಾರೆ. ಯಾರಾರು ಯಾವ ಯಾವ ಗ್ರಂಥದ ಸೂಚಿಯನ್ನು ಸಿದ್ಧಪಡಿಸಿದರು ಎಂಬುದನ್ನು ಆಯಾ ಗ್ರಂಥವಿವರದ ಕೊನೆಯಲ್ಲಿ ಆಂಗ್ಲಸಂಕೇತಾಕ್ಷರಗಳ ಮೂಲಕ ಬಿ.ಬಿ.ಬಿ, ಎಂ.ವಿ.ಆರ್. ಇತ್ಯಾದಿಯಾಗಿ ಗುರುತಿಸಲಾಗಿದೆ.

## ಸಂಪುಟಗಳಲ್ಲಿ ಇರುವ ವಿಶೇಷ ಸಂಗತಿಗಳು:

**ಸಂಪುಟ–01:–** ಇದರಲ್ಲಿ 354 ಕನ್ನಡ ಕೃತಿಗಳ ವಿಷಯವಿದೆ. ಇದರಲ್ಲಿ ಹೆಚ್ಚಾಗಿ ವೀರಶೈವಧರ್ಮತತ್ವಸಿದ್ಧಾಂತದ ಬಗ್ಗೆ ವಿವರಣೆಯಿದೆ. ಅದರ ಜೊತೆಗೆ ಶಿವಶರಣ ಕಥೆಗಳನ್ನು ವಿವರಿಸಲಾಗಿದೆ. ಪದ್ಯ 340ರ ವಿಷಯ ಚಿಕ್ಕದಾಗಿದೆ.

ಸಂಪುಟ–06:– ಇದರಲ್ಲಿ 367 ಕೃತಿಗಳ ವಿಷಯವಿದೆ. ಕೃತಿಗಳಲ್ಲಿ ವೀರಶೈವದ ಪ್ರಮುಖತತ್ವಗಳಾದ ಗುರುಲಿಂಗಜಂಗಮ ಪಾದೋದಕಪ್ರಸಾದ ವಿಭೂತಿರುದ್ರಾಕ್ಷಿ ಮಂತ್ರಗಳೆಂಬ ಅಷ್ಟಾವರಣಗಳ ವಿವರಣೆಯಿದೆ. ಪದ್ಯ 242ರಲ್ಲಿ ವ್ಯಾಕರಣ ವಿಷಯಗಳ ವಿವರಣೆಯಿದೆ. 239ರ ಪದ್ಯದಲ್ಲಿ ರಾಮಾಯಣ ವಿಷಯದ ವಿವರಣೆಯಿದೆ ಪದ್ಯ 110,111,112ರಲ್ಲಿ ಹಳೆಗನ್ನಡ ಪದಗಳಿಗಿರುವ ವಿವಿಧ ಅರ್ಥಗಳನ್ನು ವಿವರಿಸಲಾಗಿದೆ. 65ರಲ್ಲಿ ಜ್ಯೋತಿಷ್ಯಶಾಸ್ತ್ರ ತಿಳಿಸುವ ಪದ್ಯವಿದೆ. 62ರಲ್ಲಿ ಕನ್ನಡ ವ್ಯಾಕರಣ ಛಂದಸ್ಸಿನ ನಿಯಮಗಳನ್ನು ತಿಳಿಸಲಾಗುತ್ತದೆ. ಈ ಸೂಚಿಯಲ್ಲಿ ಅಷ್ಟಾವರಣದ ವಿವರಣೆಯ ಜೊತೆಗೆ ವ್ಯಾಕರಣ, ರಾಮಾಯಣ, ಜ್ಯೋತಿಷ್ಯ, ಛಂದಸ್ಸು, ಮುಂತಾದ ಮಹತ್ವವಾದ ವಿಷಯಗಳು ಇದರಲ್ಲಿವೆ. (328 ಪದ್ಯ ವಿಷಯ ಚಿಕ್ಕದಾಗಿದೆ)

## ಹೊಸ ಅಂಶಗಳು

ಇನ್ನು ಸಂಪಾದಕರು ಹೇಳಿದ ಮತ್ತೊಂದು ಗಮನಾರ್ಹವಾಗಿದೆ. " ಈವರೆಗೆ (1984 ಇಸವಿಯವರೆಗೆ) ಪ್ರಕಟವಾದ ಇಂಥ ಎಲ್ಲ ಸೂಚಿಗಳನ್ನು ಆಳವಾಗಿ ಅಭ್ಯಸಿಸಿ ಅವುಗಳಲ್ಲಿಯ ಕೊರತೆಗಳನ್ನು ನೀಗಿಸಿಕೊಂಡು ಈ ಸೂಚಿ ಸರ್ವಸಮರ್ಪಕವಾಗಿರುವಂತೆ ಯೋಜಿಸಲಾಗಿದೆ. ಅಂದರೆ ಹಸ್ತಪ್ರತಿಯ ಒಡೆತನ ಲಭಿಸಿದ ಸ್ಥಳ ಈ ಕಟ್ಟಿನಲ್ಲಿರುವ ಕೃತಿಗಳ ಸಂಖ್ಯೆ ಈ ಕಟ್ಟಿನಲ್ಲಿರುವ ಇತರ ಕೃತಿಗಳಿಗಾಗಿ ನೋಡಿ ತಾ.ಪ್ರ : ಕಾ.ಪ್ರ ಇವು ಈ ಸೂಚಿ ರಚನೆಯಲ್ಲಿ ನಾವು ಅಳವಡಿಸಿಕೊಂಡ ಹೊಸ ಅಂಶಗಳಾಗಿರುತ್ತವೆ" ಎಂದಿದ್ದಾರೆ.[5]

ಇಲ್ಲಿ ಸಂಪಾದಕರು ಸೂಚಿಸಿರುವ ಅಂಶಗಳೆಲ್ಲ ಹೊಸದೇನಲ್ಲ ಇತರ ಸೂಚಿಗಳಲ್ಲಿ ಕಾಣುವಂಥವೇ ಆಗಿವೆ. ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ ಸೂಚೀಸಂಪುಟಗಳಲ್ಲಿ[6]

ಲಭಿಸಿದ ಸ್ಥಳ ತಾಡೋಲೆ-ಕಾಗದಪ್ರತಿ ಎಂಬ ವಿಚಾರವನ್ನು ತಿಳಿಸಿದೆ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ1 ರಲ್ಲಿ (ಸಂ.ಎಸ್.ಶಿವಣ್ಣ) ವಿಶೇಷ ಎಂಬ ವಿಭಾಗದಲ್ಲಿ ಕಟ್ಟಿನಲ್ಲಿರುವ ಇತರ ಕೃತಿಗಳ ಪಟ್ಟಿ ಕೊಟ್ಟಿದ್ದಾರೆ.

## ಪ್ರಾಚೀನ ಪ್ರತಿಗಳು ಮತ್ತು ಈಚಿನ ಪ್ರತಿಗಳು

ಕನ್ನಡ ಅಧ್ಯಯನ ಪೀಠದ 6 ಸಂಪುಟಗಳಲ್ಲಿ ಕಂಡುಬರುವ ಹಸ್ತಪ್ರತಿಗಳ ವಿವರದಲ್ಲಿ ತಾಳೆಗರಿ ಪ್ರತಿಗಳು ಅಧಿಕವಾಗಿದ್ದು ಕಾಗದಪ್ರತಿಗಳು ಕಮ್ಮಿ ಇವೆ. ಸಂಪುಟ1ರಲ್ಲಿ 201ನೇ ಹಸ್ತಪ್ರತಿ 1076ನೇ ಇಸವಿಯದಾಗಿದ್ದು ಹಳೆಯ ಪ್ರತಿ ಆಗಿದೆ. 1860ರ 237 ಈಚಿನ ಪ್ರತಿ ಆಗಿದೆ. 11ನೇ ಶತಮಾನದ ಪ್ರತಿ ಎಂದರೆ 900 ವರ್ಷಗಳ ಹಿಂದಿನ ಪ್ರತಿ ಇಲ್ಲದೆ ಎಂದು ತಿಳಿಯುತ್ತದೆ.

ಪ್ರಾಚೀನ ಮತ್ತು ಈಚಿನಪ್ರತಿಗಳ ಪಟ್ಟಿ

| ಸಂಪುಟಗಳು | 01 | 06 | 07 | 08 | 09 | 10 |
|---|---|---|---|---|---|---|
| ಹಳೆಯದು | 1076 | 1130 | 1160 | 1160 | 1160 | 1130 |
| | (201ಪ) | (269) | (01) | (01) | (01) | (122) |
| ಇತ್ತೀಚಿನದು | 1860 | 1750 | 1800 | 1768 | 1656 | 1800 |
| | (237) | (230) | (227) | (11) | (344) | (50) |
| ತಾಳೆಗರಿ | 304 | 226 | 238 | 147 | 326 | 88 |
| ಕಾಗದಪ್ರತಿ | 50 | 141 | 68 | 132 | 71 | 157 |

## ಏಕಪ್ರತಿಗಳು ಮತ್ತು ಬಹುಪ್ರತಿಗಳು:

"ಒಬ್ಬಕವಿಯ ಒಂದು ಹಸ್ತಾಕ್ಷರವು ಪ್ರತಿದೊರಕಿದರೆ ಅದನ್ನು ಪರಿಷ್ಕರಿಸುವ ಅವಶ್ಯಕತೆಯಿರುವುದಿಲ್ಲ. ಸಂಪಾದಕನು ಇದಕ್ಕಾಗಿ ಕಷ್ಟಪಡಬೇಕಾಗಿಲ್ಲ ಪ್ರತಿಯನ್ನು ಹೇಗಿದೆಯೋ ಹಾಗೆ ಮುದ್ರಿಸಿದರೆ ಮುಗಿದುಹೋಯಿತು ಅವನ ಕರ್ತವ್ಯ"

ಕವಿಯ ಸ್ವಹಸ್ತಪ್ರತಿ ಸಿಗದೇ ಹೋದಾಗ ಬಹುಪ್ರತಿಗಳ ಸಹಾಯದಿಂದ ನಾವು ಕವಿಯ ಮೂಲಪಾಠವನ್ನು ಗುರುತಿಸಲು ಬರುತ್ತದೆ.

ಅವುಗಳಲ್ಲಿ ಕಾಲದೃಷ್ಟಿಯಿಂದ ಪ್ರಾಚೀನವಾದವು ಪ್ರಾದೇಶಿಕದೃಷ್ಟಿಯಿಂದ ಗಮನಾರ್ಹವಾದುದು ಪರಿಶುದ್ಧತೆಯ ದೃಷ್ಟಿಯಿಂದ ಉತ್ತಮವಾದುದು ಆಕಾರವನ್ನು ಬಳಸಿರುವುದರಿಂದ ಪರಸ್ಪರ ಸಂಬಂಧವನ್ನು ತಿಳಿಯುವದಕ್ಕೆ ಅನುಕೂಲವಾಗುತ್ತದೆ.

ಕನ್ನಡ ಅಧ್ಯಯನ ಪೀಠ ಪ್ರಕಟಿಸಿ ಸೂಚಿಗಳಲ್ಲಿ ಏಕೈಕ ಪ್ರತಿಗಳೆಷ್ಟು ಬಹುಪ್ರತಿಗಳಷ್ಟು ಎಂಬುದರ ವಿವರವನ್ನು ಇಲ್ಲಿ ಕೊಡಲಾಗಿದೆ.

**ಸಂ–01**–ರಲ್ಲಿ ಒಟ್ಟುಪ್ರತಿಗಳು 354. ಇದರಲ್ಲಿ 109 ಏಕೈಕಪ್ರತಿಗಳು, 245 ಬಹುಪ್ರತಿಗಳು.

**ಸಂ–06**–ರಲ್ಲಿ ಒಟ್ಟುಪ್ರತಿಗಳು 367. ಇದರಲ್ಲಿ 173 ಏಕೈಕಪ್ರತಿಗಳು, 194 ಬಹುಪ್ರತಿಗಳು.

**ಸಂ–07**–ರಲ್ಲಿ ಒಟ್ಟುಪ್ರತಿಗಳು 306. ಇದರಲ್ಲಿ 140 ಏಕೈಕಪ್ರತಿಗಳು, 166 ಬಹುಪ್ರತಿಗಳು.

**ಸಂ–08**–ರಲ್ಲಿ ಒಟ್ಟುಪ್ರತಿಗಳು 279. ಇದರಲ್ಲಿ 152 ಏಕೈಕಪ್ರತಿಗಳು, 127 ಬಹುಪ್ರತಿಗಳು.

**ಸಂ–09**–ರಲ್ಲಿ ಒಟ್ಟುಪ್ರತಿಗಳು 397. ಇದರಲ್ಲಿ 151 ಏಕೈಕಪ್ರತಿಗಳು, 246 ಬಹುಪ್ರತಿಗಳು.

**ಸಂ–10**–ರಲ್ಲಿ ಒಟ್ಟುಪ್ರತಿಗಳು 245. ಇದರಲ್ಲಿ 108 ಏಕೈಕಪ್ರತಿಗಳು, 137 ಬಹುಪ್ರತಿಗಳು.

### 100 ಕಟ್ಟುಗಳಿಗೆ ಸಂಪುಟರಚನೆ ಪದ್ಧತಿ:

ಕನ್ನಡ ಅಧ್ಯಯನ ಪೀಠದಲ್ಲಿರುವ ಸು 5000 ಕಟ್ಟುಗಳಲ್ಲಿ 1000 ಕಟ್ಟುಗಳನ್ನು ತೆಗೆದುಕೊಂಡು ಅದರಲ್ಲಿ 100 ಕಟ್ಟುಗಳನ್ನು ಒಂದು ವಿಭಾಗದಂತೆ 10 ವಿಭಾಗಮಾಡಿ ಪ್ರತಿ 100ಕಟ್ಟುಗಳಲ್ಲಿ ಇರುವ ಗ್ರಂಥಗಳಲ್ಲಿ ಸಂಸ್ಕೃತ ಕೃತಿಗಳನ್ನು ಕೈಬಿಟ್ಟು (ಅವುಗಳನ್ನು ಪ್ರತ್ಯೇಕ ಸಂಪುಟವಾಗಿ ರಚಿಸಲು ಯೋಜಿಸಿದ್ದರಿಂದ) ಉಳಿದ ಗ್ರಂಥಗಳನ್ನು 10 ಸಂಪುಟಗಳಲ್ಲಿ ಪ್ರಕಟಿಸಿದಾಗ ಯಾವುದೇ ಸೂಚಿ ತಯಾರಿಕಾ ಕೇಂದ್ರದಲ್ಲೂ ಈ ಕ್ರಮ

ಅನುಸರಿಸಿಲ್ಲ. ಪ್ರತಿಸಂಸ್ಥೆಯಲ್ಲೂ ಒಂದು ಸಂಪುಟಕ್ಕೆ ಎಷ್ಟು ಪುಟಗಳಿರಬೇಕು ಎಂಬ ಮಿತಿ ಗೊತ್ತುಮಾಡಿಕೊಂಡು ಅದರಲ್ಲಿ ಅಳವಡಿಸುವಷ್ಟು ಕೃತಿವಿವರಗಳನ್ನು ಕೊಟ್ಟಿದ್ದಾರೆ ಅಥವಾ ವಿಷಯಾನುಸಾರ ಎಷ್ಟು ಕೃತಿಗಳ ವಿವರವನ್ನು ಒಂದು ಸಂಪುಟದಲ್ಲಿ ಕೊಡಬೇಕೆಂದು ನಿರ್ಧರಿಸುತ್ತಾರೆ. ಆದ್ದರಿಂದ ಸಂಪುಟಗಳ ಗಾತ್ರ ಪರಿಗಣನೆಯನ್ನು ಮುಖ್ಯ ಕಟ್ಟುಗಳ ಸಂಖ್ಯೆ ಅಲ್ಲ. ಆದ್ದರಿಂದ ಕ.ವಿ.ವಿ.ದ ಈ ವಿಧಾನ ಅಷ್ಟೇನೂ ಅಗತ್ಯದ ಮಹತ್ವದ ವಿಧಾನ ಅಲ್ಲ ಎನ್ನಬೇಕಾಗಿದೆ.

**ಸೂಚೀಶಿಲ್ಪ:** ಕನ್ನಡ ಅಧ್ಯಯನಪೀಠದಿಂದ ಪ್ರಕಟವಾದ ಆರು ಸಂಪುಟಗಳಲ್ಲಿ ಅಳವಡಿಸಿರುವ ಸೂಚಿಶಿಲ್ಪದ ವಿವರಗಳನ್ನು ಸಂಪಾದಕರು ಹೀಗೆ ವಿವರಿಸಿದ್ದಾರೆ.[7]

**ಒಂದನೆಯ ಸಾಲು:** ಮಧ್ಯದಲ್ಲಿ (ದಪ್ಪಗಾತ್ರದ ಅಂಕಿ) ಕೃತಿಯ ಅನುಕ್ರಮ ನಂಬರು ಎರಡನೇ ಸಾಲಿನಲ್ಲಿ ಕೃತಿಯ ಹೆಸರು.
ಉದಾಹರಣೆ: ಒಂದನೇ ಸಾಲು 36

**ಎರಡನೇಯ ಸಾಲು:** ಕರಸ್ಥಲನಾಗದೇವರ ತ್ರಿವಿಧಿ

**ಮೂರನೇ ಸಾಲು:** ಮಧ್ಯದಲ್ಲಿ ಕೃತಿಯ ಹೆಸರು, ಬಿಡುಗಡೆ ಲಿಖಿತವಸ್ತು ಹಾಗೂ ಹಸ್ತಪ್ರತಿಭಂಡಾರದ ಕ್ರಮಸಂಖ್ಯೆ ಬಲಗಡೆ ಸಾಹಿತ್ಯ ಪ್ರಕಾರ.
ಉದಾಹರಣೆ: ತಾ.ಪ್ರ : 987/2 ಕರಸ್ಥಲನಾಗಿದೇವ ತ್ರಿವಿಧಿ

**ನಾಲ್ಕನೆ ಸಾಲು:** ಮಧ್ಯದಲ್ಲಿ ಹಸ್ತಪ್ರತಿಯ ಒಡೆತನ, ಲಭಿಸಿದಸ್ಥಳ, ಎಡಗಡೆ ಕೃತಿಯ ಪುಟಸಂಖ್ಯೆ ಬಲಗಡೆ ಪ್ರತಿಪುಟದಲ್ಲಿರುವ ಸಾಲಿನ ಸಂಖ್ಯೆ ಇರುತ್ತದೆ.
ಉದಾರಹಣೆ: 8.8" x 2" ದುರುದುಂಡೇಶ್ವರಮಠ, ಮುರಗೊಂಡ
ಸು.1430

**ಐದನೇಸಾಲು:** ಎಡಗಡೆ ಕೃತಿಯ ಪುಟ ಸಂಖ್ಯೆ ಪ್ರತಿಪುಟದಲ್ಲಿ ಇರುವ ಸಾಲಿನ ಸಂಖ್ಯೆ ಇರುತ್ತದೆ. ಇಷ್ಟು ಪ್ರತಿಯ ವಿವರಗಳಾದ ಮೇಲೆ ಕೃತಿಯವಿವರಗಳ ಬಗ್ಗೆ ಹೀಗಿದೆ.

**ಆದಿ:** ಎಂಬುದರ ಅಡಿಯಲ್ಲಿ ಆಯಾ ಕೃತಿಯ ಪ್ರಾರಂಭದ ಸ್ವಲ್ಪ ಪಾಠವನ್ನು

**ಅಂತ್ಯ:** ಎಂಬುದರ ಕೆಳಗೆ ಆಯಾ ಕೃತಿಯ ಅಂತ್ಯದ ಪಾಠವನ್ನು ಕೊಡಲಾಗಿದೆ.
ಉದಾಹರಣೆ:

**ಆದಿ:** ಶ್ರೀ ಗುರುಬಸವಲಿಂಗಾಯ ನಮಃ ಕರಸ್ಥಲನಾಗಿದೇವರ ತ್ರಿವಿಧಿ॥
ಗುರುಸ್ಥಲದನುಭಾವವನು ತೆರನ ವರ್ಣಿಸುವಂತೆ
ಧರೆಯೊಳಿರ್ಪಂತಾ ಶರಣರು
ಧರೆಯೊಳಿರ್ಪ್ಪಂತಾ ಶರಣರು ತತ್ವಾದ
ಕುರುಹುವಿದೆಂದು ತಿಳಿವುದೂ ॥ ೧ ॥

ಯೆಂಟುಮನೆಯ ಮೇಲೆ ಯೆರೆ ದುರ್ಗವಮುಱಿ
ದಾಂಟಿ ಅರಣ್ಯವ ಸುಡುತಾಲಿ॥ ನರೆನಾಯ
ಬೇಂಟಿಯನಾಡಿ ಮೆಱಿದುದೂ ॥ ೨ ॥

**ಅಂತ್ಯ:** ಪರಿಮಳವಕೊಂಬಂತೆ ವರಭೃಂಗನಂದಾದಿ
ಪರಮಹಂಸನೊಳೊಡವೆರೆದು
ಪರಮ ಹಂಸನೊಳೊಡವೆರೆದು ಕರಸ್ಥಳದ
ಗುರುಶಾಂತನೊಡನೆ ಬಯಲಾದೆ ॥ ೨ ॥

**ಸಂಕೇತಗಳು:** ಈ ಎರಡೂ ವಿಭಾಗಗಳಲ್ಲಿ ಮುಂದುವರೆದ ಪಾಠಕ್ಕಾಗಿ .......ಎಂಬ ಚಿಹ್ನೆಯನ್ನು ಲುಪ್ತಪಾಠಕ್ಕಾಗಿ X X X ಸಂಕೇತವನ್ನು ಬಳಸಲಾಗುತ್ತದೆ. ಗೊತ್ತಿಲ್ಲದೆ ಮಾಹಿತಿಗೆ? ಚಿಹ್ನೆ ಬಳಸಿದೆ.
ಉದಾಹರಣೆ[8]: ಕಾ.ಪ್ರ. ? 927

**ಆದಿ:** ----ನೀನು ಏನು ಕೇಳಿದರೆ ಸಿದ್ಧಿವಾಗುವುದು ನಿಜ ತಪ್ಪೆಲ್ಲವು ಶ್ರೀ.ಶ್ರೀ.ಶ್ರೀ

**ಅಂತ್ಯ:** 6. ಇದೆ ವರ ತೊಳಲು ರಾಜಮ X X X ।
7. ಇಲ್ಲಿ ಇಲ್ಲಿವು ಪ್ರಣತೆಗ X X X ರು ।

**ವಿಷಯ:** ವಿಭಾಗದಲ್ಲಿ ಕೃತಿಯ ಕೇಂದ್ರ ವಿಷಯವನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ಉದಾಹರಣೆ[9]: ವಿಷಯ: ಗುರುಮಹಿಮೆ, ವೀರಶೈವ ಲಿಂಗಾಂಗ ಸಾಮರಸ್ಯ, ತತ್ವಬೋಧೆ.

ವಿಷಯವನ್ನು ಸೂಚಿಕೆಗಳಲ್ಲಿ ಮೇಲ್ಕಂಡ ಶೀರ್ಷಿಕೆಗಳ ರೂಪದಲ್ಲಿ ಕೊಡುವುದನ್ನು ಅನೇಕ ಸೂಚಿಗಳಲ್ಲಿ ಕಾಣುತ್ತೇವೆ. ಆದರೆ ಕ.ಸಂ.ಸಂ.ಸೂಚಿಯಲ್ಲಿ ಸಾಕಷ್ಟು ವಿವರವಾದ ಮಾಹಿತಿಯನ್ನು ಕೊಟ್ಟಿದ್ದಾರೆ. ಕೆಲವೊಮ್ಮೆ ಕಾವ್ಯದ ಇಡೀಕಥೆಯನ್ನೇ ಸಂಗ್ರಹಿಸಿ ಕೊಟ್ಟ ನಿದರ್ಶನವಿದೆ. ಸಾಕಷ್ಟು ವಿವರಗಳನ್ನು ಗ್ರಂಥವಿಸ್ತಾರದ ದೃಷ್ಟಿಯಿಂದ ಕೊಡುವುದಿಲ್ಲ ಮತ್ತು ಇಡೀ ಕೃತಿಯ ಸಾರವನ್ನು ಅತಿ ಸಂಕ್ಷಿಪ್ತವಾಗಿ ನೀಡುವುದು ಒಂದು ಕಲೆ ಅದು ಎಲ್ಲರಿಗೂ ಬಾರದು ಉದಾಹರಣೆಗೆ ಎ.ಆರ್.ಕೃಷ್ಣಶಾಸ್ತ್ರಿಗಳು ಈ ವಿಚಾರದಲ್ಲಿ ಪರಿಣತರು ಅವರ ಸಂಸ್ಕೃತ ನಾಟಕ, ಬಂಕಿಂಚಂದ್ರ ಕೃತಿಗಳಲ್ಲಿ ನಾಟಕಗಳ, ಕಾದಂಬರಿಗಳ ಕಥಾಸಾರವನ್ನು ಅತಿಸಂಕ್ಷಿಪ್ತವಾಗಿ ಸಾರವತ್ತಾಗಿ ಸಂಗ್ರಹಿಸಿ ಕೊಟ್ಟಿರುವ ನೈಪುಣ್ಯವನ್ನು ಕಾಣಬಹುದು ಈ ಬಗೆಯ ಪರಿಶ್ರಮವನ್ನು ಸೂಚೀಕಾರರು ತೆಗೆದುಕೊಳ್ಳುವುದಿಲ್ಲ.

**ವಿಶೇಷ:** ಹಸ್ತಪ್ರತಿಯ ಸಮಗ್ರತೆ, ಅಸಮಗ್ರತೆ, ಸ್ಥಿತಿ, ಅಕ್ಷರಸ್ವರೂಪ ಮುಂತಾದ ಅಂಶಗಳನ್ನು ವಿಶೇಷದಲ್ಲಿ ಸಮಾವೇಶಗೊಳಿಸಲಾಗಿದೆ.

ಉದಾಹರಣೆ[10] ವಿಶೇಷ: ಸಮಗ್ರ: ಉತ್ತಮ: ಅಕ್ಷರಸಾಧಾರಣ

**ಈಕಟ್ಟಿನಲ್ಲಿರುವ ಕೃತಿಗಳು:** ಈ ವಿಭಾಗದಲ್ಲಿ ಹಸ್ತಪ್ರತಿಕಟ್ಟಿನಲ್ಲಿಯ ಎಲ್ಲ ಕೃತಿಗಳನ್ನು ಹೆಸರಿಸಲಾಗಿರುತ್ತದೆ. ಕನ್ನಡೇತರ ಭಾಷೆಯ ಕೃತಿಗಳ ಮುಂದೆ ಮಾತ್ರ ಚೌಕಕಂಸಿನಲ್ಲಿ ತೆಲುಗು ತಮಿಳು ಸಂಸ್ಕೃತ ಎಂದು ಸೂಚಿಸಲಾಗಿದೆ.

ಹಸ್ತಪ್ರತಿ ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಕೃತಿಗಳಿದ್ದರೆ ಪ್ರಥಮ ಕೃತಿಯ ಸೂಚೀಸಂದರ್ಭದಲ್ಲಿ ಮಾತ್ರ 'ಈ ಕಟ್ಟಿನಲ್ಲಿರುವ ಇತರ ಕೃತಿಗಳು ಎಂಬ ಶೀರ್ಷಿಕೆಯಲ್ಲಿ ಅಲ್ಲಿಯ ಮುಖ್ಯ ಕೃತಿಗಳನ್ನು ನಮೂದಿಸಲಾಗಿದೆ.

ಆದರೆ ಪ್ರಥಮೇತರ ಕೃತಿಯಸೂಚಿಯ ಸಂದರ್ಭದಲ್ಲಿ ಮಾತ್ರ 'ಈ ಕಟ್ಟಿನಲ್ಲಿರುವ ಇತರ ಕೃತಿಗಳಿಗಾಗಿ ನೋಡಿ' ತಾ.ಪ್ರ : ಕಾ.ಪ್ರ ಎಂದು ಸೂಚಿಸಲಿ ಆ ಕಟ್ಟಿನ ಕ್ರಮಸಂಖ್ಯೆಯನ್ನು ಪ್ರಥಮಕೃತಿಯ ಹೆಸರನ್ನು ಕೊಡಲಾಗಿದೆ. ಕಟ್ಟಿನಲ್ಲಿ ಒಂದೇ ಕೃತಿಯಿದ್ದ ಪಕ್ಷದಲ್ಲಿ ಈ ಕಟ್ಟಿನಲ್ಲಿರುವ ಕೃತಿಗಳು ಹಾಗೂ ಈ ಕಟ್ಟಿನಲ್ಲಿರುವ ಇತರಕೃತಿಗಳಿಗಾಗಿ ನೋಡಿ ತಾ.ಪ್ರ : ಕಾ.ಪ್ರ ಎಂಬ ಎರಡೂ ಶೀರ್ಷಿಕೆಗಳನ್ನು ಕೈಬಿಡಲಾಗಿದೆ. ಶೀರ್ಷಿಕೆಯನ್ನು ಸೂಚಿಯನ್ನು ಚಿಹ್ನೆಯನ್ನು ಬಳಸಿದೆ.

ಉದಾಹರಣೆ[10] ಈ ಕಟ್ಟಿನಲ್ಲಿರುವ ಇತರ ಕೃತಿಗಳಿಗಾಗಿ ನೋಡಿ: ತಾ.ಪ್ರ: 936/ 1 (ಕರಣಹಸಿಗೆ ಟೀಕೆ)

ಉದಾ[11] ಈಕಟ್ಟಿನಲ್ಲಿರುವ ಕೃತಿಗಳು:

1. ಕರಣಹಸಿಗೆ ಟೀಕೆ 2. ಮಿಶ್ರಾರ್ಪಣ ಟೀಕೆ 3. ಪಂಚೀಕರಣ ಟೀಕೆ

4. ಅಕ್ಕಗಳ ಸೃಷ್ಟಿಯ ವಚನದ ಟೀಕೆ 5. ಪ್ರಭುದೇವರಸೃಷ್ಟಿಯ ವಚನದ ಟೀಕೆ

6. ಕರಣಹಸಿಗೆ ಟೀಕೆ 7. ಮಿಶ್ರಾರ್ಪಣ ಟೀಕೆ 8. ಕರಣಹಸಿಗೆ ಟೀಕೆ

9. ಕರಣಹಸಿಗೆ ಟೀಕೆ.

ಉದಾ[12] ಒಂದೇ ಕೃತಿಯಿರುವ ನಿದರ್ಶನ ಕ್ರಮಾಂಕ 48 ಜಂಗಮಾದಿತ್ಯ ಸಂಗ್ರಹಟೀಕೆ

ಇದು ಸೋದಾಹರಣವಾಗಿ ವಿವರಿಸಲ್ಪಟ್ಟಿರುವ ಕನ್ನಡ ಅಧ್ಯಯನ ಪೀಠದ 6 ಸೂಚಿಗಳಲ್ಲಿರುವ ಸೂಚಿಶಿಲ್ಪದ ವಿವರಗಳಾಗಿವೆ.

**ತೌಲನಿಕ ಅಂಶಗಳು:**

ಸೂಚೀಶಿಲ್ಪದ ಮಾದರಿಗಳ ಹಿನ್ನೆಲೆಯಲ್ಲಿ ಕನ್ನಡ ಸಂಶೋಧನಸಂಸ್ಥೆಯ ಮತ್ತು ಕನ್ನಡ ಅಧ್ಯಯನಪೀಠದ ಹಸ್ತಪ್ರತಿಸೂಚಿಗಳನ್ನು ಕುರಿತು ತೌಲನಿಕವಾಗಿ ಅಲ್ಲಲ್ಲಿ ಹಲವಾರು ಸಂಗತಿಗಳನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಇತರ ಸೂಚಿಗಳ ಹಿನ್ನೆಲೆಯಲ್ಲೂ ಕೆಲವಂಶಗಳನ್ನು ಪ್ರಸ್ತಾಪಿಸಿದೆ. ಈ ಸಂದರ್ಭದಲ್ಲಿ ಮತ್ತೆ ಹಲವಾರು ಅಂಶಗಳನ್ನು ಇಲ್ಲಿ ಹೇಳಬೇಕಾಗಿದೆ.

**ಸಂಕೇತಚಿಹ್ನೆಗಳು:** ಕನ್ನಡ ಹಸ್ತಪ್ರತಿ ಸೂಚಿಗಳಲ್ಲಿ ಸಾಮಾನ್ಯವಾಗಿ ಲೇಖನಚಿಹ್ನೆಗಳು ಸಾರ್ವತ್ರಿಕವಾಗಿವೆ ಪೂರ್ಣವಿರಾಮ, ಅಲ್ಪವಿರಾಮ, ಅರ್ಧವಿರಾಮ ಆವರಣಚಿಹ್ನೆ ಇತ್ಯಾದಿ ಆದರೆ ಪಾರಿಭಾಷಿಕಚಿಹ್ನೆಗಳು ಏಕರೂಪವಾಗಿಲ್ಲ ಉದಾಹರಣೆಗೆ ಕಪ್ಪುದಪ್ಪ ಚುಕ್ಕೆಯನ್ನು ಎಂ.ಎಂ.ಕಲಬುರ್ಗಿ ಅವರು ತಮ್ಮ ಸೂಚೀಪದ್ಧತಿಯಲ್ಲಿ ಕೃತಿಪರಿಚಯ ಪ್ರತಿಪರಿಚಯಗಳೆರಡರ ನಡುವಣ ಪ್ರತ್ಯೇಕ ಚಿಹ್ನೆಯನ್ನಾಗಿ ಸೂಚಿಸಿದ್ದಾರೆ. ಅದನ್ನು ಹಾಗೆಯೇ ಅನೇಕ ಸೂಚಿಕಾರರು ಬಳಸಿದ್ದಾರೆ.[13] ಆದರೆ ಕಲಬುರ್ಗಿ ಅವರೇ ಪ್ರಧಾನ ಸಂಪಾದಕರಾಗಿ ಪ್ರಕಟವಾದ ಅಧ್ಯಯನಪೀಠದ 6 ಸಂಪುಟಗಳಲ್ಲಿ ಈ ಸಂಕೇತವನ್ನು ಕಟ್ಟಿನಲ್ಲಿರುವ ಕೃತಿಗಳ ಬಗ್ಗೆ ಹೇಳುವಲ್ಲಿ ಶೀರ್ಷಿಕೆಗೆ ಬಳಸಿದ್ದಾರೆ. ಈ ಸಂಪುಟಗಳ ಸಂಪಾದನಾ ಕಾಲಕ್ಕೆ ಎಂ.ಎಂ.ಕಲಬುರ್ಗಿ ಅವರು ಕೇವಲ ಪ್ರಧಾನ ಸಂಪಾದಕರಾಗಿದ್ದರು. ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದರು ಮತ್ತು ಕೃತಿಪರಿಚಯ ಮತ್ತು ಪ್ರತಿಪರಿಚಯದ ತರ್ಕ ಸೂಚಿವಿಧಾನವನ್ನು ಸಿದ್ಧಪಡಿಸಿರಲಿಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಕನ್ನಡ ವಿ.ವಿ.ಹ.ಸೂ ಹಂಪಿ ಸಂಪುಟಗಳಲ್ಲಿ ಪೂರ್ಣಬಿಂದುವನ್ನು ವಸ್ತು ಕಾ.ಪ್ರ/ ತಾ.ಪ್ರ ಎಂಬಲ್ಲಿ ಬಳಸಿದರೆ ಓರೆಗೆರೆಯನ್ನು ಪ್ರತಿಯ ಕ್ರಮಾಂಕಕ್ಕೆ ಬಳಸಿದೆ ಹೀಗೆ ವಿಶಿಷ್ಟಾರ್ಥದಲ್ಲಿ ಲೇಖನ ಚಿಹ್ನೆಗಳನ್ನು ಸೂಚಿಗಳಲ್ಲಿ ಬಳಸಿದೆ.

**ಶೀರ್ಷಿಕೆ ಪದಗಳು:**

ಸೂಚಿಗಳಲ್ಲಿ ಆದಿ, ಅಂತ್ಯ, ವಿಶೇಷ, ವಿಷಯ ಮೊದಲಾದ ವಿಭಾಗದ ಹೆಸರುಗಳನ್ನು ಸೂಚಿಸಿ ವಿವರಕೊಡಲಾಗುತ್ತದೆ. ಆದರೆ ಬಹುತೇಕ ಸೂಚಿಗಳಲ್ಲಿ ಇತರ ಶೀರ್ಷಿಕೆ ಪದಗಳನ್ನು ವಸ್ತು, ಆಕಾರ, ಸಾಹಿತ್ಯ, ಪ್ರಕಾರ, ಕೃತಿಹೆಸರು, ಕೃತಿಕರ್ತೃ, ದೊರೆತಸ್ಥಳ ಇತ್ಯಾದಿ ಶೀರ್ಷಿಕೆಗಳನ್ನು ಸೂಚಿಸದೆ ಅವುಗಳಿಗೆ ಸ್ಥಾನನಿರ್ದೇಶ ಮಾಡಿರುತ್ತಾರೆ. ಆಯಾ ವಿವರಗಳ ಸ್ಥಾನದಿಂದ ಅವುಗಳ ಶೀರ್ಷಿಕೆಗಳನ್ನು ತಿಳಿಯಬೇಕು ಇದಕ್ಕೆ ಒಳ್ಳೆಯ ಉದಾಹರಣೆ ಎಂ.ಎಂ.ಕಲಬುರ್ಗಿ ಅವರ ಕೃತಿಪರಿಚಯ ಪ್ರತಿಪರಿಚಯ ಸೂಚೀವಿಧಾನ.

| **ಶೀರ್ಷಿಕೆ** | **ಕೃತಿಪರಿಚಯ** | |
|---|---|---|
| ಪ್ರಕಾರ | ಕವಿ | ವಿಷಯ |
| ವಿಶೇಷ | ಕಾಲ | ಪ್ರಕಟಿತ/ಅಪ್ರಕಟಿತ |

**ಪ್ರತಿಪರಿಚಯ**

| | | |
|---|---|---|
| ಬರೆಯಲು ಬಳಸಿದವಸ್ತು/ನಂ | ಆಕಾರ | ಪುಟ |
| ಹಸ್ತಪ್ರತಿಸ್ವರೂಪ | ಲಿಪಿಸ್ವರೂಪ | ಭಾಷಾಸ್ವರೂಪ |

ಆದಿ

ಅಂತ್ಯ

ವಿಶೇಷ

ಕಟ್ಟಿನಲ್ಲಿರುವ ಪ್ರತಿಗಳು

ಇವುಗಳಲ್ಲಿ ಆದಿ ಅಂತ್ಯ ವಿಶೇಷ 3 ಶೀರ್ಷಿಕೆಗಳನ್ನು ಬಿಟ್ಟು ಉಳಿದ ಶೀರ್ಷಿಕೆಗಳ ಹೆಸರಿಲ್ಲದೆ ಅವುಗಳಿಗೆ ಗೊತ್ತುಮಾಡಿದ ಸ್ಥಳಗಳಲ್ಲಿ ವಿವರಗಳಿರುತ್ತವೆ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಗಳ ಸೂಚೀಸಂಪುಟಗಳೇ ಇದಕ್ಕೆ ನಿದರ್ಶನವಾಗಿದೆ.

**ಇಂಗ್ಲಿಷ್–ಕನ್ನಡ ಶೀರ್ಷಿಕೆಗಳು:**

ಸಾಮಾನ್ಯವಾಗಿ ಎಲ್ಲಕನ್ನಡ ಸೂಚಿಗಳಲ್ಲೂ ಶೀರ್ಷಿಕೆಗಳನ್ನು ಕನ್ನಡದಲ್ಲಿ ಕೊಡಲಾಗಿದೆ

ಆದರೆ ಕೆ.ಆರ್.ಐ ಕನ್ನಡ ಹಸ್ತಪ್ರತಿಸೂಚಿಗಳಲ್ಲಿ ಮೊದಲ 4 ಸಂಪುಟಗಳಲ್ಲಿ ಕನ್ನಡದಲ್ಲೂ ಕೊಡಲಾಗಿದೆ. ಮತ್ತು ಇತರ ಸೂಚಿಗಳಲ್ಲಿ ಇದ್ದಂತೆ ಸ್ಥಾನನಿರ್ದೇಶನದ ಮೂಲಕ ಶೀರ್ಷಿಕೆ ಹೆಸರು ಕೊಡದೆ ಕೆಲಸ ಮಾಡಿಲ್ಲ ಆದರೆ ಕನ್ನಡ ಅಧ್ಯಯನಪೀಠದ ಕೃತಿಗಳಲ್ಲಿ ಹೀಗೆ ಮಾಡಿವೆ ಕೆಲವು ಶೀರ್ಷಿಕೆ ವಿಭಾಗಗಳು ಕಂ.ಸಂ.ಸಂ ಸೂಚಿಯಲ್ಲಿದೆ ಅಧ್ಯಯನಪೀಠದ ಸೂಚಿಯಲ್ಲಿಲ್ಲ. ಇನ್ನು ಕನ್ನಡ ಸಂಶೋಧನ ಸಂಸ್ಥೆಯ ಸೂಚಿಯಲ್ಲಿ ಕೊಟ್ಟ Remarks ಶೀರ್ಷಿಕೆ ಇತರ ಕನ್ನಡ ಸೂಚಿಗಳಲ್ಲಿ ಇಲ್ಲ. ಕವಿಚರಿತೆಯ ಉಲ್ಲೇಖ ವಿಚಾರದ ಈ ಶೀರ್ಷಿಕೆಯು ಇತರ ಸೂಚಿಗಳಲ್ಲಿ ಇಲ್ಲ. ಕನ್ನಡ-ಇಂಗ್ಲಿಷ್ ಶೀರ್ಷಿಕೆಗಳನ್ನು ಕ.ಸಂ.ಸಂ ಸೂಚಿಯಲ್ಲಿ ಹೀಗಿವೆ.

1. Substance =ವಸ್ತು
2. No=ಅಂಕ
3. Size=ಆಕಾರ
4. Extent=ವಿವರ
5. Find place=ದೊರೆತಸ್ಥಳ
6. Age=ಕಾಲ
7. Author=ಕರ್ತೃ
8. Subject=ವಿಷಯ
9. Style=ಶೈಲಿ
10. Begining=ಆರಂಭ
11. End=ಮುಕ್ತಾಯ
12. points=ಸಂದರ್ಭ
13. Remarks =

ಇವುಗಳಲ್ಲಿ ಸೂಚಿಸಲೇ ಬೇಕಾದ ಯಾವುದಾದರೂ ವಿಶೇಷತೆ ಇದ್ದರೆ ಅವುಗಳನ್ನು ವಿಶೇಷ ಎಂಬಲ್ಲಿ ದಾಖಲೆಗೊಳಿಸಿದರೆ ಸಾಕು. ಇಂಥ ವಿಶೇಷ ಮಾಹಿತಿಗಳಿರುವ ಹಸ್ತಪ್ರತಿಗಳ ಸಂಖ್ಯೆ ಕಡಿಮೆ ಎಂಬುದು ಕೂಡ ಇಲ್ಲಿ ಲಕ್ಷಿಸಬೇಕಾದುದು. ಹೀಗೆ ಈ 10 ವಿವರಗಳನ್ನು ಒಳಗೊಂಡ ವರ್ಣನಾತ್ಮಕಸೂಚಿಯ ಒಂದು ಮಾದರಿಯ ಸ್ವರೂಪವನ್ನಿಸಬಹುದು.

ಈ ಸಂದರ್ಭದಲ್ಲಿ ಗಮನಿಸಲು 1985ರಲ್ಲಿ 'ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಹಸ್ತಪ್ರತಿಸೂಚಿ' ಯಲ್ಲಿ 8 ವಿವರಗಳನ್ನು ಮಾತ್ರ ಕೊಟ್ಟಿದೆ.

| | | | |
|---|---|---|---|
| 1. ಕ್ರಮ | 2. ಕೃತಿಯಹೆಸರು | 3. ಕೃತಿಕಾರ | 4. ಕಾಲ |
| 5. ಸಂಖ್ಯೆ | 6. ಗರಿಹಾಳೆ | 7. ಪ್ರಕಾರ | 8. ಇತರವಿವರ. |

ಇವುಗಳಲ್ಲಿ ಪ್ರಕಾರ, ಗರಿಹಾಳೆ ಎರಡು ಪ್ರಕಾರಬಿಟ್ಟು ಉಳಿದ 6 ಪ್ರಕಾರಇಟ್ಟು ಕೊಳ್ಳಬಹುದು ಎನ್ನುತ್ತಾರೆ ಬಿ.ಕೆ.ಹಿರೇಮಠ.

ಈ ಎಲ್ಲ ವಿಚಾರಗಳನ್ನು ಕಂಡಾಗ ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳಲ್ಲಿ ಏಕರೂಪತೆಇಲ್ಲ ಮತ್ತು ಏಕರೂಪಕ್ಕೆ ತರುವ ಪ್ರಯತ್ನಗಳು ನಡೆದಿಲ್ಲ ಎನಿಸುತ್ತದೆ. ಅಷ್ಟೇ ಅಲ್ಲ ಸ್ವತಂತ್ರ ಪ್ರವೃತ್ತಿಯ ಸೂಚಿಕಾರರು ಇತರರ ಮಾದರಿಗಳನ್ನು ಅನುಸರಿಸಲು ಸಿದ್ಧರಿಲ್ಲ ಎಂಬುದು ಕಂಡುಬರುತ್ತದೆ. ಈ ಬಗ್ಗೆ ಎಲ್ಲ ಸೂಚಿಕಾರರು ಸೇರಿ ಒಂದು ತೀರ್ಮಾನಕ್ಕೆ ಬಂದು ಏಕರೂಪಸೂಚಿ ಸಿದ್ಧಪಡಿಸುವುದು ಅಗತ್ಯವಿದೆ. ಸಾಮಾನ್ಯ ಸೂಚಿ ವಿಶಿಷ್ಟಸೂಚಿ ಎಂದು ಎರಡು ಬಗೆಸೂಚಿಮಾಡಿದರೆ ಈ ಸಮಸ್ಯೆಯನ್ನು ಬಗೆಹರಿಸಬಹುದಾಗಿದೆ.

---

## ಅಡಿಟಿಪ್ಪಣಿಗಳು

1. ಮಾರ್ಗ ಸಂಪುಟ2 1988 ಪು 677 ಎಂ.ಎಂ.ಕಲಬುರ್ಗಿ ಅವರ ಲೇಖನ ಸಂಗ್ರಹ[1]
2. ಕನ್ನಡ ಹಸ್ತಪ್ರತಿಶಾಸ್ತ್ರ 1993 ಪು.83 ಎಂ.ಎಂ.ಕಲಬುರ್ಗಿ ಸ್ನೇಹಪ್ರಕಾಶನ ಬೆಂಗಳೂರು.
3. ಹಸ್ತಪ್ರತಿ ವ್ಯಾಸಂಗ-2 ಪುಟ.108 2002 ಹಂಪಿ.ಕ.ವಿ.ಪ್ರಕಟನೆ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಭಂಡಾರ ಲೇಖನ ಎಂ.ಎಂ.ಕಲಬುರ್ಗಿ.
4. ಮೇಲಿನದೇ ಪುಟ.109
5. ಕ.ವಿ.ವಿ ಹಸ್ತಪ್ರತಿ ಸಂಪುಟ 7 'ಸೂಚೀಶಿಲ್ಪ ಪುಟ IV
6. ಕ.ಸಂ.ಸಂ. ಹಸ್ತಪ್ರತಿಸೂಚಿ ಸಂಪುಟ 12 1983 ನೋಡಿ
7. ಕ.ಅ.ಪೀ. ಹಸ್ತಪ್ರತಿಸೂಚಿ ಸಂಪುಟ 10 ಪುಟ 35 ನೋಡಿ
8. ಮೇಲಿನದೇ ಕೃತಿಸಂಖ್ಯೆ 64 ಪುಟ 60.
9. ಕ.ಅ.ಪೀ ಹಸ್ತಪ್ರತಿಸೂಚಿ ಸಂಪುಟ 10 ಪು 36 ಕರಸ್ಥಲನಾಗಿದೇವರ ತ್ರಿವಿಧಿ ಗ್ರಂಥ.
10. ಕ.ಅ.ಪೀ. ಹಸ್ತಪ್ರತಿಸೂಚಿ ಸಂಪುಟ 10 ಪು. 1
11. ಮೇಲಿನದೇ ಪುಟ 27.
12. ಮೇಲಿನದೇ ಪುಟ 45
13. ನೋಡಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಸೂಚಿಗಳ 4 ಸಂಪುಟಗಳು.
14. ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ: ಬಿ.ಕೆ.ಹಿರೇಮಠ ಪುಟ.257.

---

# ಅಧ್ಯಾಯ –6

# ಸಮಾರೋಪ

ಕನ್ನಡದಲ್ಲಿ ಹಸ್ತಪ್ರತಿ ಸಂಗ್ರಹಕಾರ್ಯ 19ನೇ ಶತಮಾನದಲ್ಲಿ ಪಾಶ್ಚಾತ್ಯರಿಂದ ಪ್ರಾರಂಭವಾಗಿ ಸೂಚಿಕಾರ್ಯ ಪ್ರಾರಂಭ ಆಯಿತು. ಅನಂತರ ಹಸ್ತಪ್ರತಿಗ್ರಂಥಗಳ ಸಂಪಾದನಕಾರ್ಯ ಪ್ರಾರಂಭವಾಯಿತು. ಈ ಕೆಲಸ ವಿದೇಶಿಯರಿಂದಲೂ ಭಾರತೀಯರಿಂದಲೂ ನಡೆದಿದೆ. ಕನ್ನಡದಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರ ಕಿಟೆಲ್, ಮೊಗ್ಲಿಂಗ್, ರೈಸ್ ಮೊದಲಾದವರ ಪಾತ್ರ ಮಹತ್ವಪೂರ್ಣವಾದುದು. ಹಸ್ತಪ್ರತಿಗಳ ಗ್ರಂಥ ಸಂಪಾದನಕಾರ್ಯವಾದ ಮೇಲೆ ಅದಕ್ಕೊಂದು ಶಾಸ್ತ್ರವ ಚೌಕಟ್ಟು ಕನ್ನಡದ ಹಿನ್ನೆಲೆಯುಲ್ಲಿ ಮೊದಲಿಗೆ ಡಿ.ಎಲ್.ನರಸಿಂಹಾಚಾರ್ ಅವರು ಕನ್ನಡ ಗ್ರಂಥ ಸಂಪಾದನ ಶಾಸ್ತ್ರದ ಮೂಲಕ ಈ ಕೆಲಸ ಮಾಡಿದರು ಅನಂತರ ಕಲಬುರ್ಗಿ, ಸೀತಾರಾಮ ಜಾಗೀರ್‌ದಾರ್ ಬಿ.ಎಸ್.ಸಣ್ಣಯ್ಯ ಮೊದಲಾದವರು ಗ್ರಂಥ ಸಂಪಾದನಾಶಾಸ್ತ್ರ ರಚನೆಯಲ್ಲಿ ಮುಖ್ಯ ಪಾತ್ರ ವಹಿಸಿದರು.

ಈ ಗ್ರಂಥಗಳಲ್ಲಿ ಸಾಂದರ್ಭಿಕವಾಗಿ ಸೂಚಿ ವಿಚಾರಗಳು ಪ್ರಸ್ತಾಪಿತವಾಯಿತು. ಅನಂತರ ಗ್ರಂಥಸಂಪಾದನೆಯ ಕವಲಾಗಿ ಹಾಗೂ ಸ್ವತಂತ್ರವಾಗಿ ಹಸ್ತಪ್ರತಿಶಾಸ್ತ್ರವೆಂಬ ಪ್ರತ್ಯೇಕಶಾಸ್ತ್ರ ರೂಪುಗೊಳ್ಳತೊಡಗಿತು. ಈ ಕ್ಷೇತ್ರದಲ್ಲಿ ಬಿ.ಎಂ.ಶ್ರೀ.ಸ್ಮಾರಕ ಸಂಶೋಧನ ಸಂಸ್ಥೆ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿವಿಭಾಗ, ವಿಚಾರಗೋಷ್ಠಿ ಗ್ರಂಥ ಪ್ರಕಟನೆಗಳ ಮೂಲಕ ಒಂದು ನೆಲೆಗಟ್ಟನ್ನು ರೂಪಿಸಿದವು. ಇದರ ಜತೆಗೆ ಹಸ್ತಪ್ರತಿಶಾಸ್ತ್ರದ ಗ್ರಂಥವನ್ನು ಎಂ.ಎಂ.ಕಲಬುರ್ಗಿ ಅವರು, ಎಚ್.ದೇವೀರಪ್ಪ ಕನ್ನಡ ಹಸ್ತಪ್ರತಿಗಳ ಇತಿಹಾಸವನ್ನು ಬಿ.ಎಸ್.ಸಣ್ಣಯ್ಯ ಅವರು, ಹಸ್ತಪ್ರತಿಶಾಸ್ತ್ರ ಪರಿಚಯ ಗ್ರಂಥವನ್ನು ಎಚ್.ಎಲ್.ಎನ್.ಭಾರತಿ ಅಂಗೈ ಗಾತ್ರದ ಪುಟ್ಟ ಗ್ರಂಥ, ಪ್ರಾಚೀನ ಹಸ್ತಪ್ರತಿಗಳು ಮಣಿಹ, ಹಸ್ತಪ್ರತಿಶಾಸ್ತ್ರ ಇತ್ಯಾದಿ ಬಿ.ಎಂ.ಶ್ರೀ.ಸ್ಮಾರಕಸಂಸ್ಥೆ ಪ್ರಕಟಿಸಿದ ಪ್ರಕಟನೆಗಳೂ ನಾ.ಗೀತಾಚಾರ್ಯರ ಹಸ್ತಪ್ರತಿಶಾಸ್ತ್ರ ವಿವೇಚನೆ, ಹಂಪಿ ಕನ್ನಡ ವಿಶ್ವವಿದ್ಯಾಲಯದವರ ಹಸ್ತಪ್ರತಿ ವ್ಯಾಸಂಗ ಗ್ರಂಥಮಾಲಿಕೆಯುಲ್ಲಿ ಬಂದ ಈವರೆಗೆ 7 ಗ್ರಂಥಗಳು ಇವೇ ಮೊದಲಾದ ಗ್ರಂಥಗಳು ಹಸ್ತಪ್ರತಿಶಾಸ್ತ್ರವನ್ನು ಪ್ರತ್ಯೇಕವಾಗಿ ಭದ್ರವಾದ ಅಡಿಪಾಯದಲ್ಲಿ ನಿಲ್ಲಿಸಲು ಕಾರಣವಾಗಿವೆ. ಹಸ್ತಪ್ರತಿಗಳ ವರ್ಣನಾತ್ಮಕಸೂಚಿಗಳ ಪಾತ್ರವೂ ಈ ದಿಸೆಯಲ್ಲಿ

ಮಹತ್ತರವಾದುದೇ ಆಗಿದೆ.

ಈ ಸಂದರ್ಭದಲ್ಲಿ ಹಸ್ತಪ್ರತಿಶಾಸ್ತ್ರದ ಅತಿಮುಖ್ಯಾಂಗಗಳಲ್ಲಿ ಒಂದಾದ ಹಸ್ತಪ್ರತಿಸೂಚಿಗಳ ಬಗ್ಗೆ ಪಟ್ಟಿಗಳೂ ಲೇಖನಗಳೂ ಬಂದಿದ್ದರೂ ಅದನ್ನೇ ಕುರಿತು ವಿಶೇಷ ಅಧ್ಯಯನವನ್ನು ಯಾರೂ ಕೈಗೊಂಡಿರಲಿಲ್ಲ ಅದರಲ್ಲೂ ಒಂದು ಸಂಸ್ಥೆಯ ಹಸ್ತಪ್ರತಿಸೂಚಿಗಳನ್ನು ಆಧಾರವಾಗಿಟ್ಟುಕೊಂಡು ವಿಶೇಷ ಅಧ್ಯಯನವನ್ನು ಕನ್ನಡದಲ್ಲಿ ಯಾರೂ ನಡೆಸಿರಲಿಲ್ಲ ಇಂಥ ಸನ್ನಿವೇಶದಲ್ಲಿ ಕನ್ನಡ ಸಂಶೋಧನ ಸಂಸ್ಥೆ ಅವರು ಮತ್ತು ಕನ್ನಡ ಅಧ್ಯಯನ ಪೀಠ ಪ್ರಕಟಿಸಿದ ಹತ್ತೊಂಬತ್ತು ಸೂಚಿಗಳನ್ನು ನೆಲೆಯಾಗಿಟ್ಟುಕೊಂಡು ಕರ್ಣಾಟಕ ವಿಶ್ವವಿದ್ಯಾನಿಲಯದ ಹಸ್ತಪ್ರತಿಸೂಚಿಗಳೆಂಬ ವಿಶಿಷ್ಟ ಅಧ್ಯಯನವನ್ನು ಮೊದಲಬಾರಿಗೆ ಇಲ್ಲಿ ಕೈಗೊಂಡಿದೆ.

1. ಈ ಅಧ್ಯಯನದಲ್ಲಿ ಮೊದಲ ಬಾರಿಗೆ ಕನ್ನಡದ ವಿವಿಧ ಹಸ್ತಪ್ರತಿ ವರ್ಣನಾತ್ಮಕ ಸೂಚಿಗಳನ್ನು ತೌಲನಿಕವಾಗಿ ಅಧ್ಯಯನಮಾಡಿ ಪ್ರತಿಯೊಂದು ಹಸ್ತಪ್ರತಿಸೂಚಿಯ ಗುಣ-ಲೋಪಗಳನ್ನು ಗಮನಿಸಲಾಗಿದೆ.

2. ಒಂದೇ ಸಂಸ್ಥೆಯ ಎಂದರೆ ಕರ್ನಾಟಕ ವಿಶ್ವವಿದ್ಯಾಲಯದ ಎರಡು ವಿಭಾಗಗಳು (ಈಗ ಕನ್ನಡ ಸಂಶೋಧನಸಂಸ್ಥೆ ಪ್ರತ್ಯೇಕವಾಗಿ ಉಳಿದಿಲ್ಲ. ಅದು ಈಗ ಕನ್ನಡ ಅಧ್ಯಯನಪೀಠದಲ್ಲಿ ಲೀನವಾಗಿದೆ) ಪ್ರಕಟಿಸಿದ ಹಸ್ತಪ್ರತಿ ಸೂಚಿಗಳನ್ನು ತೌಲನಿಕವಾಗಿ ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ.

3. ಹಸ್ತಪ್ರತಿಸೂಚಿಗಳಲ್ಲಿ ಅತಿಮುಖ್ಯವಾದುದು ಸೂಚೀಶಿಲ್ಪ. ವಿವಿಧ ಸಂಸ್ಥೆಗಳು ಅಳವಡಿಸಿಕೊಂಡು ಸೂಚೀಶಿಲ್ಪಗಳನ್ನು ತೌಲನಿಕವಾಗಿ ವಿಮರ್ಶಿಸಿದೆ. ಏಕರೂಪ ಸೂಚೀಶಿಲ್ಪದ ಬಗ್ಗೆ ಚರ್ಚೆ ಮಾಡಲಾಗಿದೆ.

4. ಹಸ್ತಪ್ರತಿಸೂಚಿಗಳಲ್ಲಿ ವೀರಶೈವ ಹಸ್ತಪ್ರತಿಗಳ ಪುಷ್ಪಿಕೆಗಳಂಥ ವಿಶಿಷ್ಟ ಸೂಚಿ ಬಗ್ಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಗ್ರಂಥ ಸೂಚಿಯಂಥ ಬೃಹತ್ ಸಮಗ್ರ ಸೂಚಿ ಬಗ್ಗೆ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ.

5. ಸೂಚಿಗಳಲ್ಲಿ ಬಳಸುವ ಲೇಖನಚಿಹ್ನೆಗಳು ಸಂಕೇತ ಪದಗಳು ಪಾರಿಭಾಷಿಕಪದಗಳು ಮೊದಲಾದವುಗಳ ಬಗ್ಗೆ ಏಕರೂಪತೆ ತರುವ ಸಾಧ್ಯತೆ ಬಗ್ಗೆ ಚರ್ಚಿಸಿದೆ.

6. ಪ್ರಕಟಿತ ಗ್ರಂಥಗಳ ಸೂಚಿಗಳಲ್ಲಿ ಮುದ್ರಿತ ಗ್ರಂಥಗಳ ಸೂಚಿಗೂ ಹಸ್ತಪ್ರತಿಗ್ರಂಥ ಸೂಚಿಗೂ ಇರುವ ವ್ಯತ್ಯಾಸ ವೈಶಿಷ್ಟ್ಯಗಳನ್ನು ಪರಿಶೀಲಿಸಿದೆ.

7. ಅಧ್ಯಯನ ಮುಖ್ಯ ಆಕರಗಳಾದ ಕನ್ನಡ ಅಧ್ಯಯನಪೀಠದ 6 ಹಸ್ತಪ್ರತಿಸೂಚಿಗಳನ್ನು 13 ಕನ್ನಡಸಂಶೋಧನ ಸಂಸ್ಥೆಯ ಸಂಪುಟಗಳನ್ನು ಆಮೂಲಾಗ್ರವಾಗಿ ವಿಮರ್ಶಿಸಿ ಅವರೆಡರ ಮಿತಿ-ಹಿರಿಮೆಗಳ ಮೌಲ್ಯಮಾಪನ ಮಾಡಿದೆ.

8. ಕನ್ನಡ ಹಸ್ತಪ್ರತಿಗಳು ಒಂದುಅಧ್ಯಯನ ಗ್ರಂಥದಲ್ಲಿ ಮತ್ತು ಹಸ್ತಪ್ರತಿಶಾಸ್ತ್ರ ಇತ್ಯಾದಿ ಗ್ರಂಥಗಳಲ್ಲಿ ಸಮಗ್ರಸೂಚಿ ಬಗ್ಗೆ ಪ್ರಸ್ತಾಪಿಸಿದ ವಿಷಯಗಳ ಬಗ್ಗೆ ವಿವರವಾಗಿ ಪ್ರಸ್ತಾಪಿಸಲಾಗಿದೆ.

9. ಸೂಚೀಶಿಲ್ಪದ ಅಂಗಗಳು ಎಷ್ಟಿರಬೇಕು ಎಂಬ ಚರ್ಚೆಯನ್ನು ವಿಮರ್ಶಾತ್ಮಕವಾಗಿ ಮಾಡಿದೆ.

10. ಕನ್ನಡ ಸೂಚೀಕರಣ ಕ್ರಿಯೆ ಬಗ್ಗೆ ಅನುಸರಿಸಿರುವ ವಿಧಾನಗಳನ್ನು ಪರಿಶೀಲಿಸಿದೆ. ಹೀಗೆ ಸೂಚಿ ಎಂದರೇನು? ಸೂಚೀಶಿಲ್ಪ ಎಂದರೇನು? ಸೂಚೀಕರಣ ಹೇಗೆ? ಸೂಚಿಗಳ ಇತಿಹಾಸ, ಸೂಚಿಗಳನ್ನು ಪ್ರಕಟಿಸಿದ ಸಂಸ್ಥೆಗಳ ಇತಿಹಾಸ, ಸಾಧನಸೂಚಿಗಳ ಬಗ್ಗೆ ಬಂದ ಗ್ರಂಥಗಳು ಲೇಖನಗಳು ಎಲ್ಲದರ ಸಮಗ್ರ ಸಮೀಕ್ಷೆಯನ್ನು ಸಂಕ್ಷಿಪ್ತವಾಗಿ ಮೊದಲಬಾರಿಗೆ ಈ ಸಂಪ್ರಬಂಧದಲ್ಲಿ ನಡೆಸಲಾಗಿದೆ.

11. ಕರ್ನಾಟಕ ವಿಶ್ವವಿದ್ಯಾಲಯದ ಎರಡು ವಿಭಾಗಗಳ ಕನ್ನಡ ಸೂಚಿಗಳ ಸಂಪುಟಗಳ ತೌಲನಿಕ ಅಧ್ಯಯನದ ಮೂಲಕ ನಾಡಿನ ಇತರ ಸೂಚಿಗ್ರಂಥಗಳ ಸಮೀಕ್ಷೆಯನ್ನು ಮಾಡಿದ ಈ ಪ್ರಯತ್ನ ಕನ್ನಡದಲ್ಲಿ ಮೊದಲಿನದು ಆಗಿದೆ.

---

# ಅನುಬಂಧಗಳು

ಅನುಬಂಧ–1

## ಆಕರ ಗ್ರಂಥಸೂಚಿ


1. ಅನಂತರಂಗಾಚಾರ್.ಎನ್. – 1955
ಮೈಸೂರು ವಿಶ್ವವಿದ್ಯಾಲಯ ಓರಿಯಂಟಲ್ ಸಂಶೋಧನ ಸಂಸ್ಥೆಯಲ್ಲಿ ಸಂಗ್ರಹಿಸಿದ ಕೈಬರಹದ ಪುಸ್ತಕ.
ಮೈಸೂರು ಗೌರ್ನಮೆಂಟ್‌ಪ್ರೆಸ್.

2. ಅಸುಂಡಿ ಅಶೋಕ. ಮು –1992
ಕನ್ನಡದಲ್ಲಿ ಸಂದರ್ಭಗ್ರಂಥಗಳು ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ. ಎನ್.ಎ.ಪ್ರಕಾಶನ ಬೆಂಗಳೂರು.

3. ಉಮಾಪತಿಶಾಸ್ತ್ರಿ. ಗೌ. ಮ. – 2004
ಕಲ್ಲಚ್ಚಿನ ಹೊತ್ತಿಗೆಗಳ ವಿವರಣಾತ್ಮಕ ಸೂಚಿ.
ಮಂಜುನಾಥ ಶಿಕ್ಷಣ ಪ್ರತಿಷ್ಠಾನ ಬೆಂಗಳೂರು.

4. ಕನ್ನಯನ್. ವ್ಹಿ – 2000
ಮದ್ರಾಸ್ ಗೌರ್ನಮೆಂಟ್ ಮ್ಯೂಜಿಯಂ ಸೂಚಿ.
ಮದ್ರಾಸ್ ವಿಶ್ವವಿದ್ಯಾಲಯ ಮದ್ರಾಸ.

5. ಕಲಬುರ್ಗಿ. ಎಂ.ಎಂ. – 1988
ಕೊಲ್ಹಾಪುರದ ಶ್ರೀಲಕ್ಷ್ಮೀಸೇನ ಭಟ್ಟಾರಕ ಜೈನಬಸದಿಯ ಕನ್ನಡ ಹಸ್ತಪ್ರತಿಯ ಸೂಚಿ
ಕನ್ನಡ ಅಧ್ಯಯನ ಪೀಠ ಧಾರವಾಡ.

6. ಕೃಷ್ಣಮೂರ್ತಿ. ಪಿ.ವ್ಹಿ. – 1999
ಲೋಚನ ಲೇಖನಸೂಚಿ.
ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

7. ಕೆಳದಿ ಗುಂಡಾಜೋಯಿಸ್ – 1989
ಜಗದ್ಗುರು ಮೂರುಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿ.
ಸೂಚಿ. ಜಗದ್ಗುರು ಮೂರು ಸಾವಿರ ಮಠ ಹುಬ್ಬಳ್ಳಿ.

8. ಗುಂಡಾಜೋಯಿಸ್ – 1987
ಬಿ.ಎಂ. ಶ್ರೀ ಪ್ರತಿಷ್ಠಾನ ಕನ್ನಡ ಹಸ್ತಪ್ರತಿಗಳ ಸೂಚಿ.

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

9. ನಾಯಕ. ಹಾ. ಮಾ. – 1984
ಕನ್ನಡ ಜಾನಪದ ಗ್ರಂಥ ಸೂಚಿ.
ಮೈಸೂರು ವಿಶ್ವವಿದ್ಯಾಲಯ ಮೈಸೂರು.

10. ಪಾಟೀಲ. ಸ. ಕೃ – 1972.
ಕನ್ನಡ ಅಭಿನಂದನ ಗ್ರಂಥಗಳ ಲೇಖನ ಸೂಚಿ.
ಮೈಸೂರು ವಿಶ್ವವಿದ್ಯಾಲಯ ಗ್ರಂಥಾಲಯ.

11. ಬಡಿಗೇರ. ವೀರೇಶ – 2000.
ಕನ್ನಡ ವಿಶ್ವವಿದ್ಯಾಲಯ ಕನ್ನಡ ಹಸ್ತಪ್ರತಿ ಸೂಚಿ. ಸ0–2
ಕನ್ನಡ ವಿಶ್ವವಿದ್ಯಾಲಯ ಹಂಪಿ.

12. ಬಡಿಗೇರ. ವೀರೇಶ – 2006.
ಕನ್ನಡ ವಿಶ್ವವಿದ್ಯಾಲಯ ಕನ್ನಡ ಹಸ್ತಪ್ರತಿ ಸೂಚಿ. ಸಂ–4
ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ ಹಂಪಿ.

13. ವೆಂಕಟರಮಣಯ್ಯ. ಟಿ.ವಿ.– 1973.
ಕನ್ನಡ ಲೇಖನ ಭಾಷಾ ಸೂಚಿ.
ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

14. ಶಿವಣ್ಣ. ಎಸ್. – 1978.
ಕನ್ನಡ ಸಾಹಿತ್ಯ ಕನ್ನಡ ಸಾಹಿತ್ಯಚರಿತ್ರೆ ಅಭ್ಯಾಸ ಸೂಚಿ. ಶ್ರೀಮುಗಳಿ.
ಉಷಾ ಸಾಹಿತ್ಯ ಮಾಲೆ ಮೈಸೂರು.

15. ಶಿವಣ್ಣ. ಎಸ್. – 1982.
ವೀರಶೈವ ಅಪ್ರಕಟಿತ ಗ್ರಂಥ ಸೂಚಿ.
ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

16. ಶಿವಣ್ಣ. ಎಸ್. – 1982.
ಕನ್ನಡ ವರ್ಣನಾತ್ಮಕ ಹಸ್ತಪ್ರತಿಗಳ ಸೂಚಿ.
ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

17. ಶಿವಣ್ಣ. ಎಸ್. – 1985.
ಜಗದ್ಗುರು. ತೋಂಟದಾರ್ಯ ಮಠದ ಕನ್ನಡ ಹಸ್ತಪ್ರತಿ ಸೂಚಿ.
ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಗದಗ.

18. ಸಣ್ಣಯ್ಯ. ಬಿ.ಎಸ್. – 1962.
ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ಕನ್ನಡ ಹಸ್ತಪ್ರತಿ ಸೂಚಿ ಬೆಂಗಳೂರು ಸಂ–01 ಮೈಸೂರು ವಿಶ್ವವಿದ್ಯಾಲಯ ಮೈಸೂರು.

19. ಸಣ್ಣಯ್ಯ. ಬಿ. ಎಸ್. – 1980.
ಕನ್ನಡ ಅಧ್ಯಯನ ಸಂಸ್ಥೆಯ ಮೈಸೂರು. ಕನ್ನಡ ಹಸ್ತಪ್ರತಿ ಸೂಚಿ.
ಸಂ–5 ಪ್ರಸಾರಾಂಗ ಮೈಸೂರು. ವಿಶ್ವವಿದ್ಯಾಲಯ ಮೈಸೂರು.

20. ಸಣ್ಣಯ್ಯ. ಬಿ. ಎಸ್. – 1988.
ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಂ ಹಸ್ತಪ್ರತಿ ಸೂಚಿ.
ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ಮೈಸೂರು.

21. ಸಣ್ಣಯ್ಯ. ಬಿ.ಎಸ್. – 2003.
ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ.
ಶ್ರುತಕೇವಲಿ ಎಜ್ಯುಕೇಶನ್ ಟ್ರಸ್ಟ್. ಶ್ರವಣಬೆಳಗೊಳ.

22. ಸುಬ್ರಹ್ಮಣ್ಯಂ. ಟಿ.ವ್ಹಿ. – 1970.
ಗ್ರಂಥ ಸೂಚಿಯ ರಚನೆ.
ಮೈಸೂರು ವಿಶ್ವವಿದ್ಯಾಲಯ ಮೈಸೂರು.

23. ಸುಬ್ರಹ್ಮಣ್ಯಂ. ಟಿ.ವಿ. – 1971.
ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಗಳ ಲೇಖನ ಸೂಚಿ.
ಮೈಸೂರು ವಿಶ್ವವಿದ್ಯಾಲಯ ಮೈಸೂರು.

24. ಹಳ್ಳೀಕೇರಿ. ಎಫ್.ಟಿ. – 2000.
ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂ–01.
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

25. ಹಳ್ಳೀಕೇರಿ. ಎಫ್.ಟಿ. –2006
ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ–2.
ಕನ್ನಡ ವಿಶ್ವವಿದ್ಯಾಲಯ ಹಂಪಿ.

26. ಹಳ್ಳೀಕೇರಿ. ಎಫ್.ಟಿ. – 2006.
ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂ–03.
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಹಂಪಿ

27. ಕತ್ರೆ.ಎಸ್. ಎಂ. 2003.
ಭಾರತೀಯ ಗ್ರಂಥ ಸಂಪಾದನೆ.
ವಸಂತ ಪ್ರಕಾಶನ ಬೆಂಗಳೂರು.

28. ಕಲಬುರ್ಗಿ. ಎಂ. ಎಂ. – 1972.
ಕನ್ನಡ ಗ್ರಂಥ ಸಂಪಾದನ ಶಾಸ್ತ್ರ.
ಸಮಾಜ ಪುಸ್ತಕಾಲಯ ಧಾರವಾಡ.

29. ಕಲಬುರ್ಗಿ. ಎಂ.ಎಂ. – 1993.
ಕನ್ನಡ ಹಸ್ತಪ್ರತಿ ಶಾಸ್ತ್ರ.
ಸ್ನೇಹ ಪ್ರಕಾಶನ ಬೆಂಗಳೂರು.

30. ಗೀತಾಚಾರ್ಯ.ನಾ. – 2000
ಹಸ್ತಪ್ರತಿ ಶಾಸ್ತ್ರ ವಿವೇಚನೆ.
ಸ್ನೇಹನಿಧಿ ಬಳಗ ಬೆಂಗಳೂರು.

31. ಗುರು. ಎ. ಆರ್. – 2002.
ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು.
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

31. ಅ)ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು–2007
ಎ.ಆರ್.ಗುರು
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ–ಬೆಂಗಳೂರು.

32. ಜಾಗೀರ್‌ದಾರ್ ಸೀತಾರಾಮ – 1978.
ಕನ್ನಡ ಗ್ರಂಥ ಸಂಪಾದನೆ ಶಾಸ್ತ್ರ
ಕರ್ನಾಟಕ ಸಂಘ ರಂಗಪುರ.

33. ದೇವೀರಪ್ಪ. ಎಚ್.
ಕನ್ನಡ ಹಸ್ತಪ್ರತಿಗಳು, ಸಾಹಿತ್ಯ ಪರಿಷತ್ ಪತ್ರಿಕೆ.
ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

34. ದೇವೀರಪ್ಪ. ಹೆಚ್. – 1977.
ಕನ್ನಡ ಹಸ್ತಪ್ರತಿಗಳ ಇತಿಹಾಸ.
ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

35. ನರಸಿಂಹಾಚಾರ್. ಡಿ.ಎಲ್. – 1964.
ಕನ್ನಡ ಗ್ರಂಥ ಸಂಪಾದನೆ.
ಡಿ.ವಿ.ಕೆ. ಪ್ರಕಾಶನ ಮೈಸೂರು.

36. ಬಡಿಗೇರ ವೀರೇಶ – 2003.
ಹಸ್ತಪ್ರತಿ ಅಧ್ಯಯನ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

37. ಭಾನುಮತಿ. ವೈ.ಸಿ. – 2003.
ಭಾರತೀಯ ಗ್ರಂಥ ಸಂಪಾದನೆ.
ರಾಜಪ್ರಕಾಶನ ಮೈಸೂರು.

38. ಭಾರತಿ.ಎಚ್.ಎಲ್.ಎನ್. – 1971.
ಪ್ರಾಚೀನ ಹಸ್ತಪ್ರತಿಗಳು.
ಮೈಸೂರು ವಿಶ್ವವಿದ್ಯಾಲಯ ಮೈಸೂರು.

39. ಸಣ್ಣಯ್ಯ. ಬಿ. ಎಸ್. – 1992.
ಹಸ್ತಪ್ರತಿ ಶಾಸ್ತ್ರ ಪರಿಚಯ.
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

40. ಸೀತಾರಾಮಯ್ಯ. ಎಂ.ವಿ. – 1981.
ಹಸ್ತಪ್ರತಿ ಶಾಸ್ತ್ರ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

41. ಸೀತಾರಾಮಯ್ಯ. ಎಂ.ವಿ. – 1982.
ಮಣಿಹ. ಫ.ಗು.ಹಳಕಟ್ಟಿ ಜನ್ಮಶತಮಾನೋತ್ಸವ ಸಂಪುಟ.
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

42. ಹಳ್ಳೀಕೇರಿ.ಎಫ್.ಟಿ. – 2002.
ಹಸ್ತಪ್ರತಿ ವ್ಯಾಸಂಗ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

43. ಹಳ್ಳೀಕೇರಿ.ಎಫ್.ಟಿ. – 2003
ಕಂಠಪತ್ರ
ವಿಕಾಸ ಪ್ರಕಾಶನ ಹೊಸಪೇಟೆ.

44. ಹಿರೇಮಠ. ಬಿ.ಕೆ. – 1992.
ಕನ್ನಡ ಹಸ್ತಪ್ರತಿಗಳ ಒಂದು ಅಧ್ಯಯನ
ವೀರಶೈವ ಅಧ್ಯಯನ ವೇದಿಕೆ ಕಸಬಾ ಜಂಬಗಿ.

45. ಕನ್ನಡ ಗ್ರಂಥಸೂಚಿ–1
1971
ಸಂಪಾದಕ ಸಮಿತಿ
ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗ

ಅನುಬಂಧ –2

# ಆಕರ ಲೇಖನಗಳ ಸೂಚಿ


1. ಹೆ: : ಅಶ್ವತ್ಥನಾರಾಯಣ.ಜಿ
ಲೇ: : ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ನನ್ನ ಅನುಭವ
ಗ್ರ: : ಮಣಿಹ ಸಂ.ಎಂ.ವಿ.ಸೀತಾರಾಮಯ್ಯ. ಆರ್‌ಶೇಷಶಾಸ್ತ್ರಿ
ಪ್ರ: : ಬಿ.ಎಂ.ಶ್ರೀಸ್ಮಾರಕ ಪ್ರತಿಷ್ಠಾನ ಬೆಂಗಳೂರು.1982

2. ಹೆ: : ಉಮಾಪತಿಶಾಸ್ತ್ರಿ–ಗಾ.ಮ.
ಲೇ: : ಹಸ್ತಪ್ರತಿ ಭಂಡಾರಗಳ ಸ್ವರೂಪ
ಗ್ರಂ: : ಹಸ್ತ ಪ್ರತಿವ್ಯಾಸಂಗ
ಸಂ: : ಸಂ.ಡಾ.ಎಫ್.ಟಿ:ಹಳ್ಳಿಕೇರಿ ಡಾ–ಕೆ.ರವೀಂದ್ರನಾಥ
ಪ್ರ: : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.2002.

3. ಹೆ: : ಕೃಷ್ಣಮೂರ್ತಿ.ಪಿ.ವಿ.
ಲೇ: : ಕನ್ನಡ ಹಸ್ತಪ್ರತಿಗಳ ಸಂಪತ್ತು ಸೂರ್ಯಕೀರ್ತಿ
ಗ್ರಂ: : ಡಾ–ಸೂರ್ಯನಾಥ ಕಾಮತ್ ಅಭಿನಂದನಾ ಗ್ರಂಥ
ಬೆಂಗಳೂರು–2000.

4. ಹೆ: : ಕಲಬುರ್ಗಿ–ಎಂ.ಎಂ.
ಲೇ: : ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರ
ಗ್ರಂ: : ಹಸ್ತ ಪ್ರತಿವ್ಯಾಸಂಗ
ಸಂ: : ಸಂ.ಡಾ–ಎಫ್.ಟಿ.ಹಳ್ಳಿಕೇರಿ–ಡಾ–ಕೆ.ರವೀಂದ್ರನಾಥ
ಪ್ರ: : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ–2002.

5. ಹೆ: : ಕಲಬುರ್ಗಿಎಂ.ಎಂ
ಲೇ: : ಹಸ್ತಪ್ರತಿಶಾಸ್ತ್ರ ಅದರ ವಿವಿಧ ಮುಖಗಳು
ಗ್ರಂ: : ಹಸ್ತಪ್ರತಿಶಾಸ್ತ್ರ
ಸಂ: : ಎಂ.ವಿ.ಸೀ.ಡಾ.ಚಿ.ಮೂ.ಬಿ.ಎಂ.ಶ್ರೀ ಪ್ರತಿಷ್ಠಾನ1983.

6. ಹೆ: : ಗೀತಾಚಾರ್ಯ.ನಾ
ಲೇ: : ಉಪೇಕ್ಷಿತ ಹಸ್ತಪ್ರತಿಗಳು.
ಗ್ರಂ: : ಫ.ಗು.ಹಳಕಟ್ಟಿ ಸಂಸ್ಮರಣ ಸಂಪುಟ
ಸಂ: : ಎಂ.ವಿ.ಸೀತಾರಾಮಯ್ಯ.ಆರ್.ಶೇಷಶಾಸ್ತ್ರಿ
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು–1982.

7. ಹೆ: : ಗೀತಾಚಾರ್ಯ.ನಾ
ಲೇ: : ಕನ್ನಡ ಹಸ್ತಪ್ರತಿಗಳ ಚರಿತ್ರೆ
ಗ್ರಂ: : ಹಸ್ತಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ. ಎಂ.ಚಿದಾನಂದಮೂರ್ತಿ
ಪ್ರ: : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು-1983.

8. ಹೆ: : ತೆಲಗಾವಿ.ಲಕ್ಷ್ಮಣ
ಲೇ: : ಹಸ್ತಪ್ರತಿ ವಿಜ್ಞಾನ ಒಂದು ಚಿಂತನೆ.ಸಂಶೋಧನೆ
ಗ್ರಂ: : ಡಾ॥ಎಂ.ಚಿದಾನಂದಮೂರ್ತಿ ಅಭಿನಂದನಗ್ರಂಥ
ಬೆಂಗಳೂರು .1991.

9. ಹೆ: : ದೇವೀರಪ್ಪ.ಎಚ್
ಲೇ: : ಕನ್ನಡ ಹಸ್ತಪ್ರತಿಗಳ ಚರಿತ್ರೆ
ಗ್ರಂ: : ಹಸ್ತಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ. ಎಂ.ಚಿದಾನಂದಮೂರ್ತಿ
ಪ್ರ: : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು-1983.

10. ಹೆ: : ಬಸವಾರಾಧ್ಯ-ಎನ್.
ಲೇ: : ಹಸ್ತಪ್ರತಿಗಳ ಓದುವಿಕೆ
ಗ್ರಂ: : ಹಸ್ತ ಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ. ಡಾ.ಎಂ.ಚಿದಾನಂದಮೂರ್ತಿ.
ಪ್ರ: : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು-1983.

11. ಹೆ: : ಮಂಜುನಾಥ.ಸಿ.ಯು.
ಲೇ: : ಹಸ್ತಪ್ರತಿ ಸಂಗ್ರಹಕಾರ್ಯ ಮತ್ತು ಗ್ರಂಥ
: ಸಂಪಾದನೆಗೆ ಬಿ.ಶಿವಮೂರ್ತಿಶಾಸ್ತ್ರೀ ಕೊಡುಗೆ
ಗ್ರಂ: ಮಣಿಹ.ಫ.ಗು.ಹಳಕಟ್ಟಿ. ಸಂಸ್ಮರಣಗ್ರಂಥ
ಸಂ: : ಎಂ.ವಿ.ಸೀತಾರಾಮಯ್ಯ.ಆರ್.ಶೇಷಶಾಸ್ತ್ರೀ
ಪ್ರ: : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು-1982.

12. ಹೆ: : ಮಹೀಶವಾಡಿ-ಬಿ.ಬಿ.
ಲೇ: : ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ನನ್ನ ಅನುಭವ
ಗ್ರಂ: : ಮಣಿಹ.ಫ.ಗು.ಹಳಕಟ್ಟಿ ಸಂಸ್ಮರಣ ಗ್ರಂಥ
ಸಂ: : ಎಂ.ಸೀತಾರಾಮಯ್ಯ ಆರ್.ಶೇಷಶಾಸ್ತ್ರೀ
ಪ್ರ: : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.1982.

13. ಹೆ: : ರಘುನಾಥಭಟ್.ಎಚ್.ಆರ್.
ಲೇ: : ಪ್ರಾಚೀನತಮ ಕನ್ನಡ ಹಸ್ತಪ್ರತಿಯ ಲಿಪಿ ವಿನ್ಯಾಸ
ಗ್ರಂ : ಮಣಿಹ. ಫ.ಗು. ಹಳಕಟ್ಟಿ ಸಂಸ್ಮರಣ ಗ್ರಂಥ
ಸಂ: : ಸಂ.ಎಂ.ವಿ.ಸೀತಾರಾಮಯ್ಯ. ಆರ್.ಶೇಷಶಾಸ್ತ್ರೀ
ಪ್ರ: : ಬಿ. ಎಂ. ಶ್ರೀಸ್ಮಾರಕ ಪ್ರತಿಷ್ಠಾನ ಬೆಂಗಳೂರು. 1982.

14. ಹೆ: : ರವೀಂದ್ರನಾಥ – ಕೆ.
ಲೇ: : ಮಠಮಾನ್ಯಗಳ ಹಸ್ತಪ್ರತಿಭಂಡಾರಗಳು.
ಗ್ರಂ: : ಹಸ್ತಪ್ರತಿ ವ್ಯಾಸಂಗ
ಸಂ: : ಡಾ॥ಎಫ್.ಟಿ.ಹಳ್ಳಿಕೇರಿ ಡಾ ರವೀಂದ್ರನಾಥ
ಪ್ರ: : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.2000.

15. ಹೆ: : ವೆಂಕಟರಾಮಾಚಾರ್ಯ.ಕೆ
ಲೇ: : ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ನನ್ನ ಅನುಭವ.
ಗ್ರಂ: : ಮಣಿಹ.ಫ.ಗು.ಹಳಕಟ್ಟಿ. ಸಂಸ್ಮರಣ ಗ್ರಂಥ
ಸಂ: : ಸಂ.ಎಂ.ವಿ.ಸೀತಾರಾಮಯ್ಯ. ಆರ್.ಶಾಸ್ತ್ರೀ
ಪ್ರ: : ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು. 1982.

16. ಹೆ: : ವಿಘ್ನರಾಜ – ಎಸ್.
ಲೇ: : ಕನ್ನಡ ಹಸ್ತಪ್ರತಿ ಭಂಡಾರಗಳ ನವೀಕರಣ
ಗ್ರಂ: ಹಸ್ತಪ್ರತಿ ವ್ಯಾಸಂಗ
ಸಂ: : ಡಾ–ಎಫ್.ಟಿ.ಹಳ್ಳಿಕೇರಿ. ಡಾ.ಕೆ.ರವೀಂದ್ರನಾಥ.
ಪ್ರ: : ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ.ಹಂಪಿ.2002.

17. ಹೆ: : ವೀರೇಶ – ಬಡಿಗೇರ
ಲೇ: : ಸಾರ್ವಜನಿಕ ಹಸ್ತಪ್ರತಿಭಂಡಾರಗಳು.
ಗ್ರಂ: : ಹಸ್ತಪ್ರತಿವ್ಯಾಸಂಗ
ಸಂ: : ಸಂ.ಎಫ್.ಟಿ.ಹಳ್ಳಿಕೇರಿ.ಕೆ.ರವೀಂದ್ರನಾಥ.
ಪ್ರ: : ಹಂಪಿಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ 2000.

18. ಹೆ: : ಶಿವಣ್ಣ.ಎಸ್.
ಲೇ: : ಕನ್ನಡ ಹಸ್ತಪ್ರತಿ ಸೂಚಿಗಳು ಹಾಗೂ ಹಸ್ತಪ್ರತಿಗಳ ಸಮಗ್ರ ಗ್ರಂಥ ಸೂಚಿ ನಿರ್ಮಾಣ.
ಗ್ರಂ: : ಹಸ್ತಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ.ಡಾ.ಚಿದಾನಂದಮೂರ್ತಿ.
ಪ್ರ: : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ.ಬೆಂಗಳೂರು 1983.

19. ಹೆ: : ಶಿವಣ್ಣ.ಎಸ್.
ಲೇ: : ಕನ್ನಡ ಹಸ್ತಪ್ರತಿ ಸೂಚಿಗಳು.
ಗ್ರಂ: : ಮಣಿಹ.ಫ.ಗು.ಹಳಕಟ್ಟಿ.ಸಂಸ್ಮರಣ ಸಂಪುಟ.
ಸಂ: : ಎಂ.ವಿ.ಸೀತಾರಾಮಯ್ಯ. ಆರ್.ಶೇಷಶಾಸ್ತ್ರೀ.
ಪ್ರ: : ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು. 1982.

20. ಹೆ: : ಸಣ್ಣಯ್ಯ. ಬಿ.ಎಸ್.
ಲೇ: : ಕೇಂದ್ರ ಹಸ್ತಪ್ರತಿ ಭಂಡಾರದ ಅವಶ್ಯಕತೆ.
ಗ್ರಂ: : ಹಸ್ತಪ್ರತಿ ವ್ಯಾಸಂಗ.
ಸಂ: : ಸಂ.ಡಾ.ಎಫ್.ಟಿ. ಹಳ್ಳಿಕೇರಿ. ಡಾ.ಕೆ. ರವೀಂದ್ರನಾಥ.
ಪ್ರ: : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.2002.

21. ಹೆ: : ಸಣ್ಣಯ್ಯ.ಬಿ.ಎಸ್.
ಲೇ: : ಕನ್ನಡ ಹಸ್ತಪ್ರತಿ ಭಂಡಾರಗಳು.
ಗ್ರಂ: : ಹಸ್ತ ಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ.ಡಾ–ಚಿದಾನಂದಮೂರ್ತಿ.
ಪ್ರ: : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.1983.

22. ಹೆ: : ಸೀತಾರಾಮಯ್ಯ – ಎಂ.ವಿ.
ಲೇ: : ಕನ್ನಡ ಹಸ್ತಪ್ರತಿಗಳ ಚರಿತ್ರೆ
ಗ್ರಂ: : ಹಸ್ತಪ್ರತಿಶಾಸ್ತ್ರ.
ಸಂ: : ಎಂ.ವಿ.ಸೀತಾರಾಮಯ್ಯ. ಚಿದಾನಂದಮೂರ್ತಿ.
ಪ್ರ: : ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಬೆಂಗಳೂರು – 1983.

23. ಹೆ: : ಸೀತಾರಾಮಯ್ಯ.ಎಂ.ವಿ.
ಲೇ: : ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂಸ್ಕರಣ.
ಗ್ರಂ: : ಮಣಿಹ.ಫ.ಗು.ಹಳಕಟ್ಟಿ ಸಂಸ್ಮರಣ ಸಂಪುಟ.
ಸಂ: : ಎಂ.ವಿ. ಸೀತಾರಾಮಯ್ಯ.ಡಾ.ಆರ್.ಶೇಷಶಾಸ್ತ್ರೀ.
ಪ್ರ: : ಬಿ.ಎಂ. ಶ್ರೀಸ್ಮಾರಕ ಪ್ರತಿಷ್ಠಾನ ಬೆಂಗಳೂರು.1982.

24. ಹೆ: : ಹಳ್ಳಿಕೇರಿ.ಎಫ್.ಟಿ.
ಲೇ: : ಕನ್ನಡ ಹಸ್ತಪ್ರತಿಗಳು. ಹೊರನಾಡು ಮತ್ತು ವಿದೇಶಗಳಲ್ಲಿ
ಗ್ರಂ: : ಹಸ್ತಪ್ರತಿ ವ್ಯಾಸಂಗ.
ಸಂ: : ಡಾ.ಎಫ್.ಟಿ.ಹಳ್ಳಿಕೇರಿ. ಡಾ.ಕೆ.ರವೀಂದ್ರನಾಥ.
ಪ್ರ: : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.2002.

25. ಹೆ: : ಹೆಗ್ಡೆ - ಎಂ.ಜಿ.
ಲೇ: : ಹಸ್ತಪ್ರತಿಗಳು–ಮೆಕೆಂಜಿ ಸಂಗ್ರಹ.
ಗ್ರಂ: : ಮಣಿಹ.ದಿ.ಫ.ಗು.ಹಳಕಟ್ಟಿ. ಸಂಸ್ಮರಣ ಗ್ರಂಥ.
ಸಂ: : ಎಂ.ವಿ.ಸೀತಾರಾಮಯ್ಯ. ಆರ್.ಶೇಷಶಾಸ್ತ್ರೀ.
ಪ್ರ: : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.1982.

26. ಲೇಖನ: : ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರ.
ಪ್ರತಿಕೆ: : ಕರ್ನಾಟಕ ಲೋಚನ ಸಂ.13.
ಪ್ರ: : ಬಿ.ಎಂ.ಶ್ರೀ ಪ್ರತಿಷ್ಠಾನ ಬೆಂಗಳೂರು.

---

ಅನುಬಂಧ -3

# ಕನ್ನಡ ಹಸ್ತಪ್ರತಿ ಗ್ರಂಥ ಭಂಡಾರಗಳು.

1. ಆಕಾಡೆಮಿ ಸಂಸ್ಕೃತ ರೀಸರ್ಚ ಮೇಲುಕೋಟೆ.
2. ಇಂಗ್ಲೆಂಡಿನಲ್ಲಿರುವ ಹಸ್ತಪ್ರತಿಗಳು.
3. ಉಸ್ಮಾನಿಯಾ ವಿಶ್ವವಿದ್ಯಾಲಯ ಹೈದರಾಬಾದ.
4. ಕನ್ನಡ ಅಧ್ಯಯನ ಸಂಸ್ಥೆ ಮೈ.ವಿ.ವಿ., ಮೈಸೂರು.
5. ಕನ್ನಡ ಅಧ್ಯಯನ ಪೀಠ ಕ.ವಿ.ವಿ., ಧಾರವಾಡ.
6. ಕನ್ನಡ ಅಧ್ಯಯನ ಕೇಂದ್ರ ಬೆಂ.ವಿ.ವಿ., ಬೆಂಗಳೂರು.
7. ಕನ್ನಡ ವಿಭಾಗ ಗು.ವಿ.ವಿ., ಗುಲ್ಬರ್ಗ.
8. ಕನ್ನಡ ವಿಭಾಗ ಮಂ.ವಿ.ವಿ., ಮಂಗಳೂರು.
9. ಕನ್ನಡ ಸಂಶೋಧನ ಸಂಸ್ಥೆ ಧಾರವಾಡ.
10. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.
11. ಕೆಂಚಗಲ್ಲು ಬಿದಿರೆದೊಡ್ಡಮಠ.
12. ಕೆಳದಿ ವಸ್ತು ಸಂಗ್ರಹಾಲಯ.
13. ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಸುಸ್ಕ್ರಿಪ್ಟ್ಸ್‌ಲೈಬ್ರರಿ ಮದ್ರಾಸು.
14. ಗವರ್ನಮೆಂಟ್ ಓರಿಯಂಟಲ್ ರೀಸರ್ಚ್ ಇನ್‌ಸ್ಟ್ಯೂಟ್ ಮೈಸೂರು.
15. ತಾತನವರ ಮಠ ಹೇಮಕೂಟ.
16. ದೇವಕುಮಾರ.ಓರಿಯಂಟಲ್ ಇನ್‌ಸ್ಟಿಟ್ಯೂಟ್.ಅರಾ.
17. ಬಾಹುಬಲಿ ಬ್ರಹ್ಮಚರ್ಯಶ್ರಮ ಸನ್ಮತಿ.
18. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ.ಬೆಂಗಳೂರು.
19. ಮದರಾಸು ಅಡಿಯರ್ ಪುಸ್ತಕಾಲಯ ಮದ್ರಾಸು.
20. ಮಂಜುನಾಥೇಶ್ವರ ಸಂಸ್ಕೃತ ಸಂಶೋಧನ ಪ್ರತಿಷ್ಠಾನ ಧರ್ಮಸ್ಥಳ.
21. ಶ್ರವಣಬೆಳಗೋಳ ಜೈನಮಠ.
22. ಶಿವಯೋಗ ಮಂದಿರ.
23. ಸಂಸ್ಕೃತ ಮಹಾಪಾಠಶಾಲೆ ಮೈಸೂರು.
24. ಹಾರನಹಳ್ಳಿ ಕೋಡಿಮಠ ಹಾಸನ.
25. ಹಾವೇರಿ ಹುಕ್ಕೇರಿ ಮಠ.
26. ಹೊಂಬುಜಮಠ.ಶಿವಮೊಗ್ಗ.
27. ಹೊಸಪೇಟೆಯ ಶ್ರೀಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನ ಮಠ ಬಳ್ಳಾರಿ.

## ಅನುಬಂಧ –4

### ಕೆ.ಆರ್.ಐ. ಪ್ರಕಟಿಸಿದ 13 ಸಂಪುಟಗಳಲ್ಲಿರುವ ಪ್ರಾಚೀನ ಮತ್ತು ಈಚಿನ ಪ್ರತಿಗಳ ವಿವರ:

| ಸಂಪುಟಗಳು | 01 | 02 | 03 | 04 | 05 | 06 | 07 | 08 | 09 | 10 | 11 | 12 | 13 |
|---|---|---|---|---|---|---|---|---|---|---|---|---|---|
| ಅತೀ ಹಳೇ ಪ್ರತಿ | 16.ಶ (48) | 15.ಶ (10) | 1712 (38) | 1714 (62) | 1762 (02) | 10.ಶ (08) | 1723 (08) | 1768 (17) | 16.ಶ (49) | 17.ಶ (18) | 17.ಶ (14) | 11.ಶ (26) | 17.ಶ (17) |
| ಇತೀಚಿನ ಪ್ರತಿ | 19.ಶ (56) | 1962 (43) | 1927 (12) | 1927 (58) | 1950 (33) | 19.ಶ (85) | 18.ಶ (82) | 1930 (20) | 20.ಶ (26) | 20.ಶ (26) | 19.ಶ (48) | 19.ಶ (63) | 20.ಶ (09) |
| ಪೂರ್ಣ | – | ✓ | – | – | – | ✓ | ✓ | ✓ | ✓ | ✓ | ✓ | ✓ | ✓ |
| ಅಪೂರ್ಣ | | – | ✓ | ✓ | ✓ | – | – | – | – | – | – | – | – |

ಅನುಬಂಧ –5

## ಕೆ.ಆರ್.ಐ.ಪ್ರಕಟಿಸಿದ 13 ಸಂಪುಟಗಳಲ್ಲಿರುವ ಬಹುಪ್ರತಿ–ಏಕೈಕಪ್ರತಿ, ಅತಿ ಬಹುಪ್ರತಿಗಳ ವಿವರ:

| ಸಂಪುಟಗಳು | 01 | 02 | 03 | 04 | 05 | 06 | 07 | 08 | 09 | 10 | 11 | 12 | 13 |
|---|---|---|---|---|---|---|---|---|---|---|---|---|---|
| ಒಟ್ಟುಪ್ರತಿ | 57 | 44 | 48 | 75 | 80 | 85 | 83 | 78 | 72 | 51 | 68 | 65 | 82 |
| ಬಹುಪ್ರತಿ | 06 | 04 | 05 | 04 | 40 | 17 | 27 | 47 | 35 | 18 | 21 | 14 | 16 |
| ಏಕೈಕಪ್ರತಿ | 51 | 40 | 43 | 71 | 33 | 47 | 56 | 31 | 37 | 22 | 32 | 51 | 25 |
| ಅತಿಬಹುಪ್ರತಿ | – | – | – | – | 07 | 21 | – | – | – | 11 | 15 | – | 41 |

ಅನುಬಂಧ –6

## ಕೆ.ಆರ್.ಐ.ಪ್ರಕಟಿಸಿದ 13 ಸಂಪುಟಗಳಲ್ಲಿರುವ ತಾಳೆಗರಿ ಮತ್ತು ಕಾಗದ ಪ್ರತಿಗಳ ವಿವರ:

| ಸಂಪುಟಗಳು | 01 | 02 | 03 | 04 | 05 | 06 | 07 | 08 | 09 | 10 | 11 | 12 | 13 |
|---|---|---|---|---|---|---|---|---|---|---|---|---|---|
| ತಾಳೆಗರಿ | 51 | 26 | 35 | 56 | 41 | 43 | 71 | 42 | 30 | 24 | 37 | 22 | 49 |
| | | | | | | | | | | | | | |
| ಕಾಗದಪ್ರತಿ | 06 | 18 | 13 | 19 | 39 | 42 | 12 | 36 | 42 | 27 | 31 | 43 | 33 |
| ಒಟ್ಟುಪ್ರತಿ | 57 | 44 | 48 | 75 | 80 | 85 | 83 | 78 | 72 | 51 | 68 | 65 | 82 |

